### ಗಾಯಕ ಶಿಖಾಮಣಿ, ಸಂಗೀತ ಕಲಾನಿಧಿ

## ಡಾ. ಎಲ್. ಮುತ್ತಯ್ಯಭಾಗವತರು

ತ್ಯಾಗರಾಜೋತ್ತರ ಕಾಲದಲ್ಲಿ ಕರ್ನಾಟಕಸಂಗೀತವನ್ನು ಸಂಪದ್ಭರಿತವಾಗಿಸಿದ ವಿದ್ವಾಂಸರಲ್ಲಿ ಮುತ್ತಯ್ಯಭಾಗವತರದು ವಿಶಿಷ್ಟಸ್ಥಾನ. ಸಂಗೀತ ಕಲಾವಿದರೂ, ವಿದ್ವಾಂಸರೂ ಇದ್ದ ಮನೆತನದಲ್ಲಿ, ತಮಿಳುನಾಡಿನಲ್ಲಿ, 1877ರ ನವೆಂಬರ್ 15 ರಂದು ಜನಿಸಿದ ಭಾಗವತರು ವಯಸ್ಕರಾದಂತೆ ಶಿವಕಾಮಿಯಮ್ಮಾಳ್ ಎಂಬ ಕನ್ಯೆಯೊಂದಿಗೆ ಲಗ್ನವಾದರು. ಭಾಗವತರಿಗೆ ವಂಶವಾಹಿಯಾಗಿ ಬಂದಿದ್ದ ವಿದ್ಯೆಯೊಂದಿಗೆ ಬೇರೆ-ಬೇರೆ ಹಲವು ಗುರುಗಳಿಂದಲೂ ವಿದ್ಯಾಭ್ಯಾಸ ಮುಂದುವರೆಯಿತು. ಇದರಿಂದಾಗಿ ಭಾಗವತರು ಗಾಯಕರಾಗಿ, ಲಾಕ್ಷಣಿಕರಾಗಿ, ಹರಿಕಥಾವಿದ್ವಾಂಸರಾಗಿ, ಮೈಸೂರಿನ ಆಸ್ಥಾನ ವಿದ್ವಾಂಸರೂ ಆದರು. ಶೈಕ್ಷಣಿಕ ಸಂಸ್ಥೆಗಳಲ್ಲೂ ಕಾರ್ಯ ನಿರ್ವಹಿಸಿ ತಮ್ಮ ಬಹುಮುಖ ಪ್ರತಿಭೆಯನ್ನು ತೋರಿದರು. ಇವೆಲ್ಲದರೊಂದಿಗೆ ವಾಗ್ಗೇಯಕಾರರಾಗಿ ಸುಮಾರು 400 ರಚನೆಗಳನ್ನು ರಚಿಸಿ, ಸಂಗೀತ ಕ್ಷೇತ್ರವನ್ನು ಸಂಪದ್ಭರಿತವಾಗಿಸಿದರು. ಇವರ ವಾಗ್ಗೇಯ ರಚನೆಗಳಲ್ಲಿ ಅಷ್ಟೋತ್ತರಶತ ಕೃತಿಗುಚ್ಛಗಳು ವಿಶೇಷವಾದವು. ಏಕೆಂದರೆ 108ಕ್ಕೂ ಅಧಿಕ ರಚನೆಗಳನ್ನುಳ್ಳ ಈ ಗುಚ್ಛಗಳಷ್ಟು ವಿಸ್ತೃತವಾದ ಕೃತಿಗುಚ್ಛಗಳನ್ನು ಬೇರಾವ ವಾಗ್ಗೇಯಕಾರರೂ ರಚಿಸಿದಂತಿಲ್ಲ. ಭಾಗವತರಿಂದ ರಚಿತವಾಗಿರುವ ಈ ಕೃತಿಗುಚ್ಛಗಳೆಂದರೆ,

1) **ಶ್ರೀ ಚಾಮುಂಡಾಂಬಾ ಅಷ್ಟೋತ್ತರಶತ ಕೃತಿಗಳು (2) ಶ್ರೀ ಶಿವಾಷ್ಟೋತ್ತರ ಶತ ಕೃತಿಗಳು.** ಇವೆರಡು ಗುಚ್ಛಕ್ಕೂ ಅಷ್ಟೋತ್ತರಶತ ಕೃತಿಗುಚ್ಛವೆಂದೇ ಹೆಸರಿದ್ದರೂ ಗುಚ್ಛದ ಆರಂಭದಲ್ಲಿ ಪ್ರಾರ್ಥನಾ ಗೀತೆಗಳಂತೆ ಕೆಲವು ಕೃತಿಗಳಿದ್ದು ಒಟ್ಟಾರೆ 108ಕ್ಕೂ ಅಧಿಕ ಸಂಖ್ಯೆಯ ಕೃತಿಗಳು ಈ ಗುಚ್ಛಗಳಲ್ಲಿವೆ.

ಪ್ರಸ್ತುತ ಸಂಸ್ಕೃತ ಭಾಷೆಯಲ್ಲಿರುವ ಶಿವಾಷ್ಟೋತ್ತರಶತ ಕೃತಿಗಳನ್ನು ಶ್ರೀ ಶೃಂಗೇರಿ ಶಾರದಾಪೀಠದ ಅಂದಿನ ಗುರುಗಳಾಗಿದ್ದ ಶ್ರೀ ಚಂದ್ರಶೇಖರಭಾರತೀ ಮಹಾಸ್ವಾಮಿಗಳೆದುರು ಪ್ರಸ್ತುತಪಡಿಸಿದಾಗ ಗುರುಗಳು ಇವರಿಗೆ ಪಚ್ಚೆಲಿಂಗವೊಂದನ್ನು ನೀಡಿ ಆಶೀರ್ವದಿಸಿದ್ದಾರೆ. ಇಂತಹ ಹಲವು ಗೌರವ ಪ್ರಶಸ್ತಿಗಳಿಗೆ ಪಾತ್ರರಾಗಿದ್ದ ಮುತ್ತಯ್ಯಭಾಗವತರು, **ವಿದ್ವಾನ್ ಸರ್ವತ್ರಪೂಜ್ಯಂತೇ** ಎಂಬ ಪ್ರಸಿದ್ಧೋಕ್ತಿಯಂತೆ ದೇಶವಿದೇಶಗಳಲ್ಲೂ ಸರ್ವಮಾನ್ಯರಾಗಿ ತಮ್ಮ ಜೀವಿತಾಂತ್ಯವನ್ನು ಮೈಸೂರಿನಲ್ಲಿ ಕಳೆದು 1945ರ ಜೂನ್ ತಿಂಗಳ 30ರಂದು ಮೈಸೂರಿನಲ್ಲೇ ದೈವಾಧೀನರಾದರು.

ನಂದಿಕೇಶ್ವರಂ ನಮಾಮ್ಯಹಂ – ಪುನ್ನಾಗವರಾಳಿ.

ನಂತರ ಶಿವಾಷ್ಟೋತ್ತರ ಕೃತಿಗಳಿದ್ದು ಕೊನೆಯಲ್ಲಿ ಪಂತುವರಾಳಿ ರಾಗದಲ್ಲಿ ಮಂಗಳ ಕೃತಿಯೂ ಒಂದಿದೆ.

3. ಗುಚ್ಛದ ಎಲ್ಲ ರಚನೆಗಳೂ ಸಂಸ್ಕೃತಭಾಷೆಯಲ್ಲಿವೆ. ಇವೆಲ್ಲವೂ ಪ್ರತ್ಯೇಕ ರಾಗಗಳಿಗೇ ಅಳವಟ್ಟಿವೆ. ಎಂದರೆ ಯಾವುದೇ ಎರಡು ಕೃತಿಯೂ ಒಂದೇ ರಾಗದಲ್ಲಿ ಸಂಯೋಜಿತವಾಗಿಲ್ಲ. ಇಲ್ಲಿ ಬಳಕೆಯಾದ ರಾಗಗಳು ಪ್ರಾಚೀನವೂ, ತ್ಯಾಗರಾಜಾದಿಗಳಿಂದ ಪ್ರಚಾರಕ್ಕೆ ಬಂದಂಥವೂ ಅಥವಾ ಮುತ್ತಯ್ಯಭಾಗವತರೇ ವಿಶೇಷವಾಗಿ ಪ್ರಚಾರಕ್ಕೆ ತಂದ ರಾಗಗಳೂ ಆಗಿವೆ. ಅಷ್ಟಲ್ಲದೆ ತೀರ ಹತ್ತಿರದ ರಾಗವೆನ್ನುವ ಕಲ್ಯಾಣಿ–ವಾಚಸ್ಪತಿ, ಆರಭಿ–ದೇವಗಾಂಧಾರಿ–ಸಾಮ, ಶಹನ–ದರ್ಬಾರ್‌ನಂತಹ ರಾಗಗಳೂ, ಪಂಚಮ, ಗೌರಿ, ಸಾಲಗಭೈರವಿ, ವಿಜಯಶ್ರೀ, ಮೋಹನಕಲ್ಯಾಣಿಯಂಥ ಅಪರೂಪ ರಾಗಗಳೂ ಹಿಂದೂಸ್ಥಾನೀಕಾಪಿ, ಹಿಂದೂಸ್ಥಾನೀಬೇಹಾಗ್‌ನಂಥ ರಾಗಗಳೂ ಕೃತಿಗಳಿಗೆ ಸಂಯೋಜಿತವಾಗಿವೆ. ಒಟ್ಟಾರೆ, ಮಂಗಳವೂ ಸೇರಿದಂತೆ 13 ಮೇಳರಾಗಗಳೂ, ಉಳಿದವು ಜನ್ಯರಾಗಗಳೂ ಈ ಗುಚ್ಛದಲ್ಲಿ ಕಾಣಸಿಗುತ್ತವೆ.

4. ಗುಚ್ಛದಲ್ಲಿನ ಕೃತಿಗಳು ದೀರ್ಘಕೃತಿಗಳಲ್ಲ. ಬಹುತೇಕ ಕೃತಿಗಳು ಚಿಟ್ಟೆಸ್ವರವನ್ನು ಹೊಂದಿವೆ. ಅಪವಾದಾತ್ಮಕವಾಗಿ ಕೆಲವು ಕೃತಿಗಳಿಗೆ ಚಿಟ್ಟೆಸ್ವರದ ಅಳವಡಿಕೆ ಇಲ್ಲ. (ಉದಾಹರಣೆಗೆ, ಬೇಹಾಗ್ ರಾಗದ ತ್ರಿಪುರಾಂತಕ) ಹೀಗಾಗಿ ಪಲ್ಲವಿ, ಅನುಪಲ್ಲವಿ, ಚರಣಗಳನ್ನು ಮಾತ್ರ ಹೊಂದಿದ ಕೃತಿಗಳನ್ನು ತ್ರಿಧಾತುಕವೆಂದೂ ಚಿಟ್ಟೆಸ್ವರವನ್ನು ಹೊಂದಿರುವ ಕೃತಿಗಳನ್ನು ಚತುರ್ಧಾತುಕವೆಂದೂ ಪರಿಗಣಿಸಬಹುದು.

5. ಶಿವನ ನಾಮರೂಪಗಳನ್ನು ಕೊಂಡುಕೊನೆದಾಡಬೇಕೆಂಬ ಹಂಬಲಕ್ಕೆ ಶಿವಭಕ್ತರಿಗೆ ಕೊನೆಮೊದಲಿಲ್ಲ. ಅಂತೆಯೇ ಈ ಗುಚ್ಛದ ಕೃತಿಗಳಲ್ಲಿ ಶಿವನಾಮಸಂಕೀರ್ತನೆಯೇ ಎದ್ದು ಕಾಣುತ್ತದೆ. ಆದರೆ ನಾಮಸ್ತುತಿಯ ನಡುವೆ ನಮೋಸ್ತುತೇ, ಪಾಲಯಮಾಂ, ಪರಿಪಾಲಯ, ನಮಃ, ಮಾಂಪಾಲಯ, ವಂದೇ, ವಂದೇಹಂ, ಭಜೇಹಂ, ಭಜಾಮ್ಯಹಂ, ಮಾಮವ, ನಮಸ್ತೇ, ಭಜಮಾನಸಸತತಂ, ಭಾವಭಕ್ತಿಂದೇಹಿ ಎಂಬ ಕ್ರಿಯಾಪದಗಳ ಜೋಡಣೆ ಅಳವಟ್ಟಿವೆ. ಅಪರೂಪವಾಗಿ ಇಂಥ ಕ್ರಿಯಾಪದ ಯಾವುದೂ ಇಲ್ಲದೆ ಬರಿಯ ನಾಮಸ್ಮರಣೆಯಷ್ಟೇ ಉಳ್ಳ ರಚನೆಗಳೂ ಕಾಣಬರುತ್ತವೆ. (ಉದಾಹರಣೆಗೆ ಪೂರ್ಣಚಂದ್ರಿಕೆ ರಾಗದ ಶಶಿಶೇಖರ).

6. ಕೃತಿಗಳಿಗೆ ಬಹುಪ್ರಯೋಗದಲ್ಲಿರುವ ಆದಿ, ರೂಪಕ, ತ್ರಿಪುಟ, ಛಾಪು, ಝಂಪೆ ತಾಳಗಳನ್ನು ಬಳಸಲಾಗಿದೆ.

7. ಹರಿಕೇಶ ಅಂಕಿತ ಎಲ್ಲ ಕೃತಿಗಳಲ್ಲೂ ಇದೆ.

8. ಸಂಗೀತ–ನಾಟ್ಯಗಳ ಸೃಷ್ಟಿಕರ್ತ ಈಶ್ವರನೇ. ಈತ ಸಂಗೀತಪ್ರಿಯನೂ, ಸಂಗೀತಲೋಲನೂ, ನಟನರಂಜನನೂ ಹೌದು. ಆದ್ದರಿಂದ ಈಶ್ವರನಿಗೂ ಸಂಗೀತಕ್ಕೂ ಇರುವ ಸಂಬಂಧವನ್ನೂ

ನಾಮರೂಪಗಳೂ, ಲೀಲಾವಿಲಾಸಗಳೂ, ತಾತ್ತ್ವಿಕ ಚಿಂತನೆಗಳೂ, ಕಲ್ಪನೆಗಳೂ ನಮ್ಮನ್ನು ಕೈಹಿಡಿದು ನಡೆಸುತ್ತಿರುವ ಪರಾತ್ಪರವಸ್ತು ಆತನೇ ಎಂಬುದನ್ನು ಮನದಟ್ಟುಮಾಡುತ್ತವೆ.

ಇಲ್ಲಿ ಉಪಮನ್ಯು ಕೃತವಾದ ಶಿವಸ್ತೋತ್ರವೊಂದನ್ನು ಸ್ಮರಿಸಬಹುದು. ಉಪಮನ್ಯು ಹೀಗೆನ್ನುತ್ತಾನೆ,

ಶಿವನೇ, ನೀನು ಮರಣದಾಯಕವಾದ ವಿಷವನ್ನು ಹೊಂದಿದ್ದರೂ ಅಮೃತವಾಗುವವನು. ಶವಮುಂಡಗಳ ಆಭರಣವನ್ನು ಧರಿಸಿದ್ದರೂ ಪವಿತ್ರವಾದವನು. ಭವನಾದರೂ ಸತ್ಪುರುಷರಿಗೆ ಭವಾಂತಕನು. ವಿಷಮನೇತ್ರನಾದರೂ ಭಕ್ತರೆಲ್ಲರನ್ನೂ ಸಮದೃಷ್ಟಿಯಿಂದ ನೋಡುವವನು. ಶೂಲಧಾರಿಯಾಗಿದ್ದರೂ (ನೋವಿದ್ದರೂ) ರೋಗರಹಿತನು. ದೃಢವಾದ ವೈರಾಗ್ಯವುಳ್ಳವನಾದರೂ ಅನುರಾಗವುಳ್ಳವನು. ಭಿಕ್ಷುಕನಾದರೂ ನೀನು ಮಹಾ ಈಶ್ವರನು. ಪ್ರಭುವೇ ಈ ನಿನ್ನ ಚರಿತ್ರೆಯೇ ವಿಚಿತ್ರ. ಇನ್ನು, ಆಚಾರ್ಯ ಶಂಕರರು ಶ್ರೀ ಶಿವಮಾನಸ ಪೂಜಾಸ್ತೋತ್ರದಲ್ಲಿ ಶಿವನಿಗೆ ಜಯಘೋಷ ಮಾಡಿ ಕ್ಷಮೆಯಾಚನೆ ಕೇಳುತ್ತಾರೆ.

**ಕರಚರಣಕೃತಂ ವಾಕ್ಕಾಯಜಂ ಕರ್ಮಜಂ ವಾ**
**ಶ್ರವಣನಯನಜಂ ವಾ ಮಾನಸಂ ವಾಪರಾಧಮ್ ।**
**ವಿಹಿತಮವಿಹಿತಂವಾ ಸರ್ವಮೇತತ್ ಕ್ಷಮಸ್ವ**
**ಜಯಜಯ ಕರುಣಾಬ್ಧೇ ಶ್ರೀ ಮಹಾದೇವಶಂಭೋ ॥**

ಅರ್ಥಾತ್, ಕರುಣಾಳುವಾದ ಶಂಭೋ, ನನ್ನ ಕೈಕಾಲುಗಳಿಂದಾಗಲೀ, ಮನೋವಾಕ್ಕಾಯಗಳಿಂದಾಗಲೀ, ಕಿವಿಕಣ್ಣುಗಳಿಂದಾಗಲೀ, ಮಾನಸಿಕವಾಗಿಯಾಗಲೀ ಮಾಡಿದ ವಿಹಿತಾವಿಹಿತವಾದ ಸಮಸ್ತ ಅಪರಾಧಗಳನ್ನೂ ಕ್ಷಮಿಸು, ಶ್ರೀಮಹಾದೇವ ಜಯಜಯ ಎನ್ನುತ್ತಾರೆ.

**ಶ್ರೀಶಿವಾಷ್ಟೋತ್ತರಶತ ಕೃತಿಗುಚ್ಛ ಮತ್ತು ಅದಕ್ಕೆ ಸಂಬಂಧಿಸಿದ ಕೆಲವು ಗಮನಾರ್ಹ ಅಂಶಗಳೆಂದರೆ,**

1. ಮುತ್ತಯ್ಯಭಾಗವತರು ಶಿವಾಷ್ಟೋತ್ತರಶತ ಕೃತಿಗಳನ್ನು ರಚಿಸಿ 1937ರಲ್ಲಿ ಅದನ್ನು ನಂಜನಗೂಡಿನ ಶ್ರೀಕಂಠೇಶ್ವರನಿಗೆ ಸಮರ್ಪಿಸಿ ದೇವಸ್ಥಾನದಲ್ಲಿ ಮಂಗಳಮಾಡಿದ್ದಾರೆ.
2. ಶಿವಸ್ತುತಿಗಳ ಆರಂಭಕ್ಕೆ ಮುನ್ನ ಈ ಗುಚ್ಛದಲ್ಲಿ ಪ್ರತ್ಯೇಕವಾದ ಏಳು ಕೃತಿಗಳಿವೆ. ಅದರ ವಿವರವೆಂದರೆ,

| ಕೃತಿ | | ರಾಗ |
|---|---|---|
| ಶ್ರೀಮಹಾಗಣಪತೇ | – | ಮಲಹರಿರಾಗ |
| ಸರಸ್ವತೀ ದೇವಿ | – | ಸರಸ್ವತೀ ಮನೋಹರಿ |
| ಶ್ರೀ ಸಾಂಬಶಿವಸದ್ಗುರೋ | – | ಸೂರ್ಯಕಾಂತಿ |
| ಬಾಲಸುಬ್ರಹ್ಮಣ್ಯಂ | – | ಅಭೇರಿ |
| ಜಯನಾರಾಯಣ | – | ಅಭೋಗಿ |
| ಹೇಮಗಿರೀಶ | – | ಈಶಮನೋಹರಿ |

ನಂದಿಕೇಶ್ವರಂ ನಮಾಮ್ಯಹಂ – ಪುನ್ನಾಗವರಾಳಿ.

ನಂತರ ಶಿವಾಷ್ಟೋತ್ತರ ಕೃತಿಗಳಿದ್ದು ಕೊನೆಯಲ್ಲಿ ಪಂತುವರಾಳಿ ರಾಗದಲ್ಲಿ ಮಂಗಳ ಕೃತಿಯೂ ಒಂದಿದೆ.

3. ಗುಚ್ಛದ ಎಲ್ಲ ರಚನೆಗಳೂ ಸಂಸ್ಕೃತಭಾಷೆಯಲ್ಲಿವೆ. ಇವೆಲ್ಲವೂ ಪ್ರತ್ಯೇಕ ರಾಗಗಳಿಗೇ ಅಳವಟ್ಟಿವೆ. ಎಂದರೆ ಯಾವುದೇ ಎರಡು ಕೃತಿಯೂ ಒಂದೇ ರಾಗದಲ್ಲಿ ಸಂಯೋಜಿತವಾಗಿಲ್ಲ. ಇಲ್ಲಿ ಬಳಕೆಯಾದ ರಾಗಗಳು ಪ್ರಾಚೀನವೂ, ತ್ಯಾಗರಾಜಾದಿಗಳಿಂದ ಪ್ರಚಾರಕ್ಕೆ ಬಂದಂಥವೂ ಅಥವಾ ಮುತ್ತಯ್ಯಭಾಗವತರೇ ವಿಶೇಷವಾಗಿ ಪ್ರಚಾರಕ್ಕೆ ತಂದ ರಾಗಗಳೂ ಆಗಿವೆ. ಅಷ್ಟಲ್ಲದೆ ತೀರ ಹತ್ತಿರದ ರಾಗವೆನ್ನುವ ಕಲ್ಯಾಣಿ–ವಾಚಸ್ಪತಿ, ಆರಭಿ–ದೇವಗಾಂಧಾರಿ–ಸಾಮ, ಶಹನ–ದರ್ಬಾರ್‌ನಂತಹ ರಾಗಗಳೂ, ಪಂಚಮ, ಗೌರಿ, ಸಾಲಗಭೈರವಿ, ವಿಜಯಶ್ರೀ, ಮೋಹನಕಲ್ಯಾಣಿಯಂಥ ಅಪರೂಪ ರಾಗಗಳೂ ಹಿಂದೂಸ್ಥಾನೀಕಾಪಿ, ಹಿಂದೂಸ್ಥಾನೀಬೇಹಾಗ್‌ನಂಥ ರಾಗಗಳೂ ಕೃತಿಗಳಿಗೆ ಸಂಯೋಜಿತವಾಗಿವೆ. ಒಟ್ಟಾರೆ, ಮಂಗಳವೂ ಸೇರಿದಂತೆ 13 ಮೇಳರಾಗಗಳೂ, ಉಳಿದವು ಜನ್ಯರಾಗಗಳೂ ಈ ಗುಚ್ಛದಲ್ಲಿ ಕಾಣಸಿಗುತ್ತವೆ.

4. ಗುಚ್ಛದಲ್ಲಿನ ಕೃತಿಗಳು ದೀರ್ಘಕೃತಿಗಳಲ್ಲ. ಬಹುತೇಕ ಕೃತಿಗಳು ಚಿಟ್ಟೆಸ್ವರವನ್ನು ಹೊಂದಿವೆ. ಅಪವಾದಾತ್ಮಕವಾಗಿ ಕೆಲವು ಕೃತಿಗಳಿಗೆ ಚಿಟ್ಟೆಸ್ವರದ ಅಳವಡಿಕೆ ಇಲ್ಲ. (ಉದಾಹರಣೆಗೆ, ಬೇಹಾಗ್ ರಾಗದ ತ್ರಿಪುರಾಂತಕ) ಹೀಗಾಗಿ ಪಲ್ಲವಿ, ಅನುಪಲ್ಲವಿ, ಚರಣಗಳನ್ನು ಮಾತ್ರ ಹೊಂದಿದ ಕೃತಿಗಳನ್ನು ತ್ರಿಧಾತುಕವೆಂದೂ ಚಿಟ್ಟೆಸ್ವರವನ್ನು ಹೊಂದಿರುವ ಕೃತಿಗಳನ್ನು ಚತುರ್ಧಾತುಕವೆಂದೂ ಪರಿಗಣಿಸಬಹುದು.

5. ಶಿವನ ನಾಮರೂಪಗಳನ್ನು ಕೊಂಡುಕೊನೆದಾಡಬೇಕೆಂಬ ಹಂಬಲಕ್ಕೆ ಶಿವಭಕ್ತರಿಗೆ ಕೊನೆಮೊದಲಿಲ್ಲ. ಅಂತೆಯೇ ಈ ಗುಚ್ಛದ ಕೃತಿಗಳಲ್ಲಿ ಶಿವನಾಮಸಂಕೀರ್ತನೆಯೇ ಎದ್ದು ಕಾಣುತ್ತದೆ. ಆದರೆ ನಾಮಸ್ತುತಿಯ ನಡುವೆ ನಮೋಸ್ತುತೇ, ಪಾಲಯಮಾಂ, ಪರಿಪಾಲಯ, ನಮಃ, ಮಾಂಪಾಲಯ, ವಂದೇ, ವಂದೇಹಂ, ಭಜೇಹಂ, ಭಜಾಮ್ಯಹಂ, ಮಾಮವ, ನಮಸ್ತೇ, ಭಜಮಾನಸಸತತಂ, ಭಾವಭಕ್ತಿಂದೇಹಿ ಎಂಬ ಕ್ರಿಯಾಪದಗಳ ಜೋಡಣೆ ಅಳವಟ್ಟಿವೆ. ಅಪರೂಪವಾಗಿ ಇಂಥ ಕ್ರಿಯಾಪದ ಯಾವುದೂ ಇಲ್ಲದೆ ಬರಿಯ ನಾಮಸ್ಮರಣೆಯಷ್ಟೇ ಉಳ್ಳ ರಚನೆಗಳೂ ಕಾಣಬರುತ್ತವೆ. (ಉದಾಹರಣೆಗೆ ಪೂರ್ಣಚಂದ್ರಿಕೆ ರಾಗದ ಶಶಿಶೇಖರ).

6. ಕೃತಿಗಳಿಗೆ ಬಹುಪ್ರಯೋಗದಲ್ಲಿರುವ ಆದಿ, ರೂಪಕ, ತ್ರಿಪುಟ, ಛಾಪು, ಝಂಪೆ ತಾಳಗಳನ್ನು ಬಳಸಲಾಗಿದೆ.

7. ಹರಿಕೇಶ ಅಂಕಿತ ಎಲ್ಲ ಕೃತಿಗಳಲ್ಲೂ ಇದೆ.

8. ಸಂಗೀತ–ನಾಟ್ಯಗಳ ಸೃಷ್ಟಿಕರ್ತ ಈಶ್ವರನೇ. ಈತ ಸಂಗೀತಪ್ರಿಯನೂ, ಸಂಗೀತಲೋಲನೂ, ನಟನರಂಜನನೂ ಹೌದು. ಆದ್ದರಿಂದ ಈಶ್ವರನಿಗೂ ಸಂಗೀತಕ್ಕೂ ಇರುವ ಸಂಬಂಧವನ್ನೂ

ಅಲ್ಲದೆ ಸಂಗೀತಸಂಬಂಧಿತ ಅಂಶಗಳನ್ನೂ ಅದೆಷ್ಟೋ ಕೃತಿಗಳಲ್ಲಿ ಮುತ್ತಯ್ಯಭಾಗವತರು ಹೇಳಿದ್ದಾರೆ.

9. ಶಿವನು ಸಾಕಾರನೂ, ನಿರಾಕಾರನೂ ಹೌದು ಎಂಬ ವೇದಾಂತದ ಮಾತುಗಳನ್ನಾಧರಿಸಿ ಭಾಗವತರು ಮತ್ತೆ ಮತ್ತೆ ಸಾಕಾರ ನಿರಾಕಾರಗಳನ್ನು ಉಲ್ಲೇಖಿಸುತ್ತಾರೆ.

10. ಪರಮೇಶ್ವರನ ಪರತ್ವ, ಸೌಲಭ್ಯ ಮತ್ತು ಕಲಾತ್ಮಕ ಲಕ್ಷಣಗಳೆಲ್ಲವನ್ನೂ ಕೃತಿಗಳಲ್ಲಿ ಕಾಣಬಹುದಾಗಿದೆ. ಶಿವನು ರಾಜಧರ, ರಾಜಾಲಂಕಾರ, ರಾಜಕಲಾಧರನೆಂದೂ, ಸುಂದರಾಕಾರನೆಂದೂ, ಮುಕ್ತಿದಾಯಕನೆಂದೂ ಬೇರೆ ಬೇರೆ ರಚನೆಗಳಲ್ಲಿ ಹಲವು ಬಾರಿ ಪ್ರಯೋಗಿಸಿದ್ದಾರೆ.

11. ಒಂದೇ ಅರ್ಥಬರುವ ಬೇರೆ ಬೇರೆ ಪದಗಳನ್ನು ಬೇರೆ ಬೇರೆ ಕೃತಿಗಳಲ್ಲಿ ಅಳವಡಿಸಲಾಗಿದೆ– ಎಂದರೆ ಇಂದುಶೇಖರ, ಚಂದ್ರಧರ, ಶರ್ವರೀಶಧರ, ಸೋಮಶೇಖರ ಎಂದು ಶಿವನು ಚಂದ್ರಧರಿಸಿದವನೆನ್ನಲೂ, ಅಂತೆಯೇ, ಪಾರ್ವತೀಶನೆನ್ನಲು, ಪಾರ್ವತೀಮನೋಹರ, ಪಾರ್ವತೀರಮಣ, ಪಾರ್ವತೀನಾಯಕ, ಪಾರ್ವತೀಪ್ರಿಯ. ಹಾಗೆಯೇ, ವಿಷ್ಣು ಮತ್ತು ಬ್ರಹ್ಮ ವಂದಿತನೆನ್ನಲು ವಿಧಿವಂದಿತ, ವಾಣೀಪತಿವಂದಿತ, ಅವನೀಧರನುತ, ಸೀತಾಪತಿನುತ ಎಂಬಂತೆಯೂ, ಶಿವನು ಕರುಣಾನಿಧಿ ಎನ್ನಲು ಕರುಣಾಸಾಗರ, ಕೃಪಾಸಾಗರ, ಕೃಪಾನಿಧೇ, ಕೃಪಾಜಲಧಿ, ಪರಮದಯಾಳೋ ಮುಂತಾಗಿಯೂ, ಆನೆಯಚರ್ಮಹೊದ್ದವನೆನ್ನಲು ಇಭಚರ್ಮಾಂಬರ, ಕರಿಚರ್ಮಾಂಬರ, ಸಾಮಜಚರ್ಮಾಂಬರ ಮುಂತಾಗಿಯೂ ಬಳಸಲಾಗಿದೆ.

12. ಸರ್ವವೂ ಈಶ್ವರನೇ ಎಂಬುದನ್ನು ಮನದಟ್ಟುಮಾಡಲು ಸಕಲ, ಸರ್ವ – ಪದಗಳನ್ನು ಬಳಸಿದ್ದಾರೆ. (ಕೃತಿಗಳು 2, 15, 47, ಮುಂತಾದುವು) ಅಂತೆಯೇ ಶಿವನನ್ನು ಚಿದಾನಂದ, ಚಿತ್ಸಭೇಷ, ಸಚ್ಚಿದಾನಂದ, ಸಚ್ಚಿದಾಕಾರನೆಂದು ಹಲವು ಬಾರಿ ಸಂಬೋಧಿಸಲಾಗಿದೆ. ಶಿವನು ಭವಪಾಶವಿಮೋಚನನೆಂದು ಭವಭಯಹರ, ಜನನಾದಿ ಭಯವಿಮೋಚನ, ವಿವಿಧ ಕರ್ಮಭವ ಮುಂತಾಗಿ ಕಾಲಕಾಲನೆಂಬ ಪದವನ್ನಂತೂ ಅತ್ಯಧಿಕ ಕೃತಿಗಳಲ್ಲಿ ಅಳವಡಿಸಲಾಗಿದೆ. (ಕೃತಿಸಂಖ್ಯೆ 9, 11, 21, 29, 32, 34, 45, 57 ಮುಂತಾದುವು).

13. ಕೆಲವು ಕೃತಿಗಳಿಗೆ ಅಳವಡಿಸಿರುವ ರಾಗಗಳನ್ನು ಗಮನಿಸಿದಾಗ ಸಾಹಿತ್ಯ ಮತ್ತು ರಾಗದ ಅಳವಡಿಕೆಯಲ್ಲಿ ಸಾಮ್ಯತೆ ಕಾಣಬರುತ್ತದೆ. ಉದಾಹರಣೆಗೆ ಸಾಮಪ್ರಿಯ ಎಂದಾರಂಭವಾಗುವ ಕೃತಿಗೆ ಸಾಮರಾಗವೇ ನಿಬದ್ಧವಾಗಿದೆ.

14. ಕಾಶೀಕ್ಷೇತ್ರ, ಭೀಮಾಶಂಕರಕ್ಷೇತ್ರ, ಗಜಾಸುರನ ಕಥೆ, ಬಾಣಾಸುರ, ಕುಬೇರ ಮುಂತಾದ ಕೆಲವು ಪುರಾಣ ಪ್ರಸಂಗಗಳ ಸ್ಥೂಲ ಪ್ರಸ್ತಾಪ ಇಲ್ಲಿ ಮಾಡಲಾಗಿದೆ.

15. ಶಿವಾಷ್ಟೋತ್ತರಶತವು ಯಾವ ಯಾವ ನಾಮಗಳಿಂದ ಆರಂಭವಾಗುತ್ತವೋ ಅದೇ ನಾಮಗಳಿಂದ ಬಹುತೇಕ ಕೃತಿಗಳನ್ನೂ ಆರಂಭಿಸಲಾಗಿದೆ. ಅಪರೂಪವಾಗಿ ಇದು ಹೀಗಿಲ್ಲದೆ ಕೃತಿ ಆರಂಭವಾದ ನಂತರ ಶಿವಾಷ್ಟೋತ್ತರದ ನಾಮ ಅಳವಡಿಕೆಯಾಗಿರುವುದೂ ಉಂಟು.

ಶ್ರೀ ಮಹಾಗಣಪತಿಸ್ತುತಿ

## ಶ್ರೀ ಮಹಾಗಣಪತೇ ದೇಹಿಶಿವಂ

**ರಾಗ – ಮಲಹರಿ** **ರೂಪಕತಾಳ**

**ಶ್ರೀ ಮಹಾಗಣಪತೇ ದೇಹಿಶಿವಂ ದಯಾನಿಧೇ ।**
**ವಾಮನರೂಪಾಲಂಕಾರ ಕೋಮಲತರ ಶುಭಶರೀರ ।**
**ಹರಿಕೇಶಾಷ್ಟೋತ್ತರಶತ ವರನಾಮಕೃತಿ ಸಹಾಯ**
**ಸ್ವರರಾಗಲಯ ನವರಸಯುತ ಸುರುಚಿರ ವಾಗ್ಝುರಿಂ ದೇಹಿ ।**
**ಪರಿಪೂರ್ಣಾನುಗ್ರಹಮೂರ್ತೇ ಪರಮಪಾವನ ಘನಕೀರ್ತೆ ॥**

ದಯಾನಿಧಿಯಾದ ಶ್ರೀಮಹಾಗಣಪತಿಯೇ, ಮಂಗಳವನ್ನು ಪ್ರಸಾದಿಸು. ವಾಮನ ರೂಪದಲ್ಲಿದ್ದು ಅಲಂಕೃತನಾಗಿರುವ ಮೃದುಶರೀರಿಯೇ, ಶ್ರೇಷ್ಠವಾದ ನಾಮಕೃತಿಗಳನ್ನು ಸ್ವರ, ರಾಗ, ಲಯಗಳಿಂದ ನವರಸಯುತವಾಗಿ ರಚಿಸಲು ವಾಕ್ ಸಹಾಯ ನೀಡು. ಭಕ್ತರಿಗೆ ಪೂರ್ಣವಾಗಿ ಅನುಗ್ರಹಿಸುವ ಪರಮಪಾವನನೇ, ಅದ್ಭುತ ಕೀರ್ತಿವಂತನೇ,ಹರಿಕೇಶನ ಅಷ್ಟೋತ್ತರ ಶತನಾಮಕೃತಿಗಳನ್ನು ರಚಿಸಲು ನನಗೆ ವಾಗ್ಝುರಿಯನ್ನು ಪ್ರಸಾದಿಸು.

ಹೀಗೆಂದು ಮುತ್ತಯ್ಯಭಾಗವತರು ಶಿವಾಷ್ಟೋತ್ತರಶತ ಕೃತಿಗುಚ್ಛದ ಆರಂಭದಲ್ಲಿ ಶ್ರೀಮಹಾಗಣಪತಿಯನ್ನು ಪ್ರಾರ್ಥಿಸಿ ಬೇಡಿದ್ದಾರೆ. ಶ್ರೀಮಹಾಗಣಪತಿಯು ಆದಿಪೂಜ್ಯನಾದ ದೇವರು. ಈತನ ಪ್ರಾರ್ಥನೆ ಇಲ್ಲದೆ ಮಾಡಹೊರಟ ಯಾವುದೇ ಕಾರ್ಯವೂ ವಿಫಲಗೊಳ್ಳುವುದೆಂಬುದು ನಂಬುಗೆ. ಈ ನಂಬುಗೆಯನ್ನು ಕರ್ನಾಟಕ ಸಂಗೀತ ಪಿತಾಮಹರೆನಿಸಿದ ಶ್ರೀಪುರಂದರದಾಸರು ತಮ್ಮ ಒಂದು ರಚನೆಯ ಮೂಲಕ ಮನದಟ್ಟುಮಾಡಿದ್ದಾರೆ. ಲಂಕಾಧಿಪತಿಯಾದ ರಾವಣೇಶ್ವರನು ಕಠೋರ ತಪವನ್ನಾಚರಿಸಿ ಪರಮೇಶ್ವರನಿಂದಲೇ ವರಪಡೆದವನು. ಆದರೆ ಅಭೀಷ್ಟ ಈಡೇರಿಕೆಗಾಗಿ ತಪವನ್ನಾಚರಿಸುವಾಗ ಮೊದಲಿಗೆ ವಿಘ್ನನಿವಾರಕನಾದ ಗಣಪತಿಯನ್ನು ಆತ ಪೂಜಿಸಲಿಲ್ಲ. ಹೀಗಾಗಿ ವಿಘ್ನನಿವಾರಕನ ಅವಕೃಪೆಗೆ ಆತ ಪಾತ್ರನಾಗಬೇಕಾಯಿತು. ಅಂತೆಯೇ ರಾವಣನ ಆಶಯ ಪೂರೈಕೆಯಾಗದೆ ಭಕ್ತನಾಗಿ ಪಡೆದ ವರಗಳೂ ನಿಷ್ಫಲವಾಯಿತು ಎಂಬ ಈ ಅಂಶವನ್ನು ಪುರಂದರರು ಉಲ್ಲೇಖಿಸುತ್ತಾ ಆರಂಭದಲ್ಲಿ ಗಣಪತಿಸ್ತುತಿಯನ್ನು ಮಾಡಬೇಕೆಂಬುದಕ್ಕೆ ಹರಿಯಾಜ್ಞೆಯೇ ಇದೆ ಎನ್ನುತ್ತಾರೆ. ಅಲ್ಲದೆ ತ್ರಿಮೂರ್ತಿಗಳಿಂದಲೂ ಈತ ಪ್ರಥಮಪೂಜೆ ಪಡೆಯತೊಡಗಿದವನೆಂದು ಲಿಂಗಪುರಾಣದಲ್ಲೂ ಉಲ್ಲೇಖವಿದೆ.

ವಂದಿಸುವುದಾದಿಯಲಿ ಗಣನಾಥನ
ಸಂದೇಹ ಸಲ್ಲ ಶ್ರೀಹರಿಯಾಜ್ಞೆ ಇದಕುಂಟು

ಹಿಂದೆ ರಾವಣ ತಾನು ವಂದಿಸದೆ ಗಜಮುಖನ
ನಿಂದು ತಪವನುಗೈದು ವರಪಡೆಯಲು
ಒಂದು ನಿಮಿಷದಿ ಬಂದು ವಿಘ್ನವನು ಆಚರಿಸಿ
ತಂದ ವರಗಳನೆಲ್ಲ ಧರೆಗೆ ಇಳಿಸಿದನು॥

ಹಲವು ಕಾಲದಿಂದಲೂ ಇರುವ ಈ ಅಚಲನಂಬುಗೆಯಿಂದಲೇ ಮುತ್ತಯ್ಯಭಾಗವತರೂ ಮಹಾಗಣೇಶನನ್ನು ಶಿವಾಷ್ಟೋತ್ತರಶತ ಕೃತಿಗುಚ್ಛಾರಂಭದಲ್ಲಿ ಸ್ಮರಿಸಿದ್ದಾರೆ. ಹರಿಕೇಶಾಷ್ಟೋತ್ತರಶತ ಎಂದು ಅವರಿಲ್ಲಿ ಹೇಳಿದ್ದರೂ, ಹರಿಕೇಶನಿಗೂ ಶಿವನಿಗೂ ಅವರ ಪ್ರಕಾರ ವ್ಯತ್ಯಾಸವಿಲ್ಲ. ಹೀಗಾಗಿ ಅವರು ಈ ನಾಮವನ್ನು ಬಳಸಿದ್ದಾರೆ. ಅಲ್ಲದೆ ಈ ಪದವು ಅವರ ಕೃತಿಗಳ ಅಂಕಿತವೂ ಆಗಿದೆ.

ಗಣಪತಿಗೆ ಗಣೇಶ, ವಿನಾಯಕ, ಮಾತಂಗಮುಖ, ದ್ವೈಮಾತುರ, ವಿಘ್ನೇಶ್ವರ, ವಕ್ರತುಂಡ ಮುಂತಾಗಿ ಅದೆಷ್ಟೋ ಹೆಸರುಗಳುಂಟು. ಆತನ ಪ್ರಾಚೀನತೆ, ವೈಶಿಷ್ಟ್ಯಗಳು ಹಲವು. ವೇದವ್ಯಾಸರು ಹೇಳಿದ ಭಾರತಕಥೆಯನ್ನು ಬರೆದವನು. ಪಾರ್ವತಿ-ಗಂಗೆ ಇಬ್ಬರನ್ನೂ ತಾಯಿಯಾಗಿ ಪಡೆದು ದ್ವೈಮಾತುರನೆನಿಸಿದವನು. ಕವಿಗಣದ ಅಧ್ಯಕ್ಷನಾದವನು. ಇಂತಹ ಇನ್ನೂ ಅನೇಕ ವಿಶೇಷಗಳನ್ನು ಹೊಂದಿದ ಗಜಾನನನು ಋಗ್ವೇದದಲ್ಲಿ ಬೃಹಸ್ಪತಿಯೆನಿಸಿದ್ದಾನೆ. ಒಟ್ಟಾರೆ ಅತ್ಯಂತ ಪ್ರಾಚೀನನೂ, ವಿಶ್ವಮಾನ್ಯನೂ, ಅಗ್ರಪೂಜ್ಯನೂ ವಿನಾಯಕನಾಗಿದ್ದಾನೆ.

ಗಣಪತಿಯ ಕುರಿತಾಗಿ ವಿಫುಲವಾದ ತಂತ್ರ, ತತ್ತ್ವ, ಪುರಾಣ, ಶಾಸ್ತ್ರಗಳಿದ್ದು ಅವೆಲ್ಲವೂ ಗಣಪತಿಯ ಮಹಿಮೆಯನ್ನು ವಿವರಿಸಿವೆ. ಬಹುತೇಕ ನಮ್ಮೆಲ್ಲ ವಾಗ್ಗೇಯಕಾರರೂ ಅಲ್ಪಸಂಖ್ಯೆಯಲ್ಲಿ ಅಥವಾ ಅಧಿಕ ಸಂಖ್ಯೆಯಲ್ಲಿ ಗಣಪತಿ ಸ್ತುತಿಗಳನ್ನು ರಚಿಸಿದ್ದಾರೆ.

ಪ್ರಸ್ತುತ ಮುತ್ತಯ್ಯಭಾಗವತರು ಶಿವಾಷ್ಟೋತ್ತರಶತ ಕೃತಿಗುಚ್ಛದ ಆರಂಭದಲ್ಲಿ ರಚಿಸಿರುವ ಗಣಪತಿಸ್ತುತಿಕೃತಿಯು ಮಲಹರಿರಾಗದಲ್ಲಿ ಸಂಯೋಜಿತವಾಗಿದೆ. ಈ ನಿಟ್ಟಿನಲ್ಲಿ ಅವರು ಪುರಂದರರು ಹಾಗೂ ಮುತ್ತುಸ್ವಾಮಿದೀಕ್ಷಿತರನ್ನು ಅನುಸರಿಸಿರುವುದು ತಿಳಿಯಬರುತ್ತದೆ. ಎಂದರೆ ಪುರಂದರರು ಶ್ರೀಗಣನಾಥ ಎಂಬ ಗೀತೆಯನ್ನೂ, ಮುತ್ತುಸ್ವಾಮಿದೀಕ್ಷಿತರು ಪಂಚಮಾತಂಗಮುಖ ಎಂಬ ಕೃತಿಯನ್ನೂ ಇದೇ ರಾಗದಲ್ಲಿ ರಚಿಸಿರುವಂತೆ, ಭಾಗವತರೂ ಗಣಪತಿಸ್ತುತಿಯನ್ನು ಮಲಹರಿ ರಾಗದಲ್ಲೇ ರಚಿಸಿರುವುದು ಇಲ್ಲಿ ಗಮನಾರ್ಹ.

ಮಲಹರಿಯು 15ನೇ ಮಾಯಾಮಾಳವಗೌಳ ಮೇಳದಲ್ಲಿ ಜನ್ಯವಾಗಿದೆ. ಇದರ ಆರೋಹಾವರೋಹಗಳು **ಸ ರಿ ಮ ಪ ದ ಸ - ಸ ದ ಪ ಮ ಗ ರಿ ಸ.** ಆರೋಹದಲ್ಲಿ 5

ಅವರೋಹದಲ್ಲಿ 6 ಸ್ವರಗಳಿರುವುದರಿಂದ ಮಲಹರಿಯು ಔಡವಷಾಡವ ರಾಗವೆನಿಸಿದೆ. ಉಪಾಂಗವಾದ ಪ್ರಾತಃಕಾಲಿಕವಾದ, ಭಕ್ತಿಪೂರ್ಣವಾದ ರಾಗವಿದು.

———o———

ಓಂ ಶಿವಾಯನಮಃ

## 1. ಶಿವಶಿವ ಶಂಭೋ ಶ್ರೀಕಂಠವಿಭೋ

ರಾಗ – ಕಲ್ಯಾಣಿ ಆದಿತಾಳ

ಶಿವಶಿವ ಶಂಭೋ ಶ್ರೀಕಂಠವಿಭೋ।
ಭವಭಯಹರ ಹರ ಪಾರ್ವತೀ ಮನೋಹರ।
ಪರಮ ದಯಾಕರ ಭಕ್ತ ಪ್ರಿಯಕರ।
ಸ್ಕಂದಜನಕ ಶ್ರೀಸುಂದರಾಂಗ ಶುಭ
ಇಂದುಶೇಖರ ಮುನಿವಂದ್ಯ ಸಚ್ಚಿದಾನಂದ
ಮಂದಹಾಸಮುಖ ನಂದಿಗಣಾರ್ಚಿತ
ನಂದ ಹರಿಕೇಶ ನಮೋಸ್ತುತೇ ಪರ ॥

ಭಗವಂತನು ಸಾಕಾರನೂ ನಿರಾಕಾರನೂ ಹೌದು. ಸಾಕಾರವೆಂಬುದು ಭಗವಂತನ ವ್ಯಕ್ತರೂಪವಾದರೆ ನಿರಾಕಾರವೆಂಬುದು ಆತನ ಅವ್ಯಕ್ತರೂಪ. ನಿರಾಕಾರವೆಂಬುದು ವೈಜ್ಞಾನಿಕವಾಗಿ ಎಷ್ಟೇ ಸತ್ಯವಾದರೂ ಮನುಷ್ಯನಿಗೆ ವಿಶೇಷ ಸಂತೋಷ ನೀಡುವುದು ದೇವರ ಸಾಕಾರ ಸ್ವರೂಪವೇ. ಇದರಿಂದಲೇ ಮೂರ್ತಿಪೂಜೆ ಪ್ರಾಧಾನ್ಯ ಪಡೆದಿರುವುದು. ಶಿವಾಷ್ಟೋತ್ತರಶತ ಕೃತಿಗುಚ್ಛದ ಪ್ರಥಮ ಕೃತಿಯಾದ ಶಿವಶಿವಶಂಭೋ ಎಂಬ ಈ ಕೃತಿಯಲ್ಲಿ ಮುತ್ತಯ್ಯಭಾಗವತರು ಈಶ್ವರನ ಸಾಕಾರರೂಪವನ್ನೇ ವರ್ಣಿಸಿರುವುದು. ಇಲ್ಲಿ ಚಿತ್ರಣಗೊಂಡಿರುವ ಈಶ್ವರನು ಸುಂದರಾಂಗ, ಶುಭಕರ, ಚಂದ್ರನನ್ನು ಶಿರದಲ್ಲಿ ಧರಿಸಿದವ, ಮುನಿಗಳಿಂದ ವಂದಿಸಲ್ಪಟ್ಟವ, ಮಂದಹಾಸ ವದನ, ನಂದಿಯೇ ಮೊದಲಾದ ನಿತ್ಯಸೂರಿಗಳಿಂದ ಅರ್ಚಿಸಲ್ಪಟ್ಟ ಸ್ಕಂದನ ತಂದೆಯಾಗಿದ್ದಾನೆ. ಶಂಭು ಎನಿಸಿ ಜನನ ಮರಣಗಳ ಭಯವನ್ನು ನೀಗಿಸುವ ಪಾರ್ವತೀಮನೋಹರನೂ, ಪರಮದಯಾಕರನೂ, ಭಕ್ತಪ್ರಿಯನೂ ಆಗಿ ಚಿತ್ರಿತನಾಗಿದ್ದಾನೆ. ಇಂಥ ಶಿವನಿಗೆ ಭಾಗವತರು ನಮಸ್ಕರಿಸುತ್ತಿದ್ದಾರೆ.

ಕೃತಿಯು ಶಿವ ಶಬ್ದದಿಂದಲೇ ಆರಂಭವಾಗಿದೆ. ಸ್ಮೃತಿಯ ಶ್ಲೋಕವೊಂದು ಶಿವ ಶಬ್ದದ ಮಹತ್ವವನ್ನು ಹೀಗೆ ಹೇಳುತ್ತದೆ.

**ವಿದ್ಯಾಸು ಶೃತಿರುತ್ಕೃಷ್ಟಾ ರುದ್ರೈಕಾದಶಿನೀ ಶೃತೌ।**
**ತತ್ರ ಪಂಚಾಕ್ಷರೀ ತಸ್ಯಾಂ ಶಿವ ಇತ್ಯಕ್ಷರದ್ವಯಂ॥**

ಇದರ ಅರ್ಥ, ವಿದ್ಯೆಗಳಲ್ಲೆಲ್ಲ ವೇದವಿದ್ಯೆ ಶ್ರೇಷ್ಠವಾದುದು. ವೇದವಿದ್ಯೆಯಲ್ಲಿಯೂ ಏಕಾದಶಾನುವಾಕ್ಯಗಳನ್ನು ಒಳಗೊಂಡ ರುದ್ರಾಧ್ಯಾಯವು ಶ್ರೇಷ್ಠವಾದುದು. ಆ ರುದ್ರಾಧ್ಯಾಯದಲ್ಲೂ ಪಂಚಾಕ್ಷರೀ ಮಂತ್ರವು ಶ್ರೇಷ್ಠವಾದುದು. ಆ ಪಂಚಾಕ್ಷರೀ ಮಂತ್ರದಲ್ಲಿಯೂ 'ಶಿವ' ಎಂಬೆರಡು ಅಕ್ಷರಗಳು ಇನ್ನೂ ಶ್ರೇಷ್ಠವಾದುದು. **ಶಿವಂ ಕರೋತೀತಿ ಶಿವಃ** ಎಂದು ಶಿವ ಶಬ್ದವನ್ನು ಅರ್ಥೈಸಲಾಗಿದೆ. ಶಿವ ಎಂದರೆ ಮಂಗಳ. ಜಗತ್ತೆಲ್ಲವೂ ಯಾವನಲ್ಲಿ ಆಶ್ರಯಪಡೆದಿದೆಯೋ, ಯಾವನು ವಿಕಾರವಿಲ್ಲದವನೋ, ಅವನೇ

ಶಿವ. ಶಿವನಿಗೆ ಸಹಸ್ರಾರು ರೂಪಗಳಿವೆಯೆಂದು **ಸಹಸ್ರಾಣಿ ಸಹಸ್ರಶೋ ಯೇ ರುದ್ರಾಃ** ಎನ್ನುತ್ತದೆ ವೇದ. ಅವುಗಳಲ್ಲಿ ಕೆಲವು ರೂಪಗಳನ್ನಷ್ಟೇ ವೇದ, ಪುರಾಣ, ಆಗಮಗಳು ನಿರೂಪಿಸಿದಂತೆ ಕಾಣಬರುತ್ತದೆ.

ಈಶ್ವರನ ಸ್ವರೂಪವನ್ನು ಪ್ರಧಾನವಾಗಿ ಪರತ್ವ, ಸೌಲಭ್ಯ ಮತ್ತು ಕಲಾತ್ಮಕ ಎಂದು ಮೂರು ವಿಧವಾಗಿ ವಿಂಗಡಿಸಬಹುದು. ಪರತ್ವ ಎಂಬುದು ಆತನ ಸರ್ವಶ್ರೇಷ್ಟತೆಯನ್ನು ಎಂದರೆ ಸರ್ವಜ್ಞತ್ವ, ಸರ್ವಶಕ್ತಿತ್ವ ಮತ್ತು ಸರ್ವಾಂತರ್ಯಾಮಿತ್ವವನ್ನು ಒಳಗೊಂಡುದು. ಸೌಲಭ್ಯವೆಂಬುದು ಆತನ ದಯಾಪರತೆ ಹಾಗೂ ಭಕ್ತರಿಗಾಗಿ ಆತ ಸುಲಭನಾಗುವಿಕೆಯನ್ನು ಒಳಗೊಂಡರೆ ಕಲಾತ್ಮಕವೆಂಬುದು ಆತನ ದಿವ್ಯಸೌಂದರ್ಯವನ್ನು ಒಳಗೊಳ್ಳುತ್ತದೆ. ಪ್ರಸ್ತುತ ಕೃತಿಯಲ್ಲಿ ಮುತ್ತಯ್ಯಭಾಗವತರು ಈಶ್ವರನ ಸೌಲಭ್ಯ ಮತ್ತು ಕಲಾತ್ಮಕ ವಿಧಗಳನ್ನು ಗುರುತಿಸಿದ್ದಾರೆ. ಭವಭಯಹರ, ಪರಮದಯಾಕರ, ಭಕ್ತಪ್ರಿಯಕರ ಎಂಬ ಪದಪ್ರಯೋಗಗಳಿಂದ ಈಶ್ವರನ ಸೌಲಭ್ಯವನ್ನೂ, ಪಾರ್ವತೀಮನೋಹರ, ಸುಂದರಾಂಗ, ಮಂದಹಾಸವದನ ಎಂಬ ಪದಪ್ರಯೋಗಗಳಿಂದ ಕಲಾತ್ಮಕ ವರ್ಣನೆಯನ್ನೂ ನೀಡಿದ್ದಾರೆ. ಇಲ್ಲಿ ಇನ್ನೂ ಒಂದು ಅಂಶವುಂಟು. ಈಶ್ವರನು ಸಚ್ಚಿದಾನಂದ ರೂಪಿ. ಸತ್-ಚಿತ್-ಆನಂದಗಳು ಆತನ ಸ್ವರೂಪ. ಸತ್ ಎಂಬುದು ಸತ್ಯ, ಹಾಗೆಂದರೆ ಭಗವಂತ ತನ್ನ ಅಸ್ತಿತ್ವಕ್ಕಾಗಿ ಬೇರಾವ ವಸ್ತುವನ್ನೂ ಅವಲಂಬಿಸಿಲ್ಲ. ನಿರ್ದಿಷ್ಟ ದೇಶ-ಕಾಲಗಳಿಗೆ ಸೀಮಿತನಲ್ಲ. ಸಾರ್ವಕಾಲಿಕನೂ, ಸರ್ವಾಂತರ್ಯಾಮಿಯೂ, ಆದ್ಯಂತರಹಿತನೂ ಹೌದು. ಎಲ್ಲ ವಿಕಾರಗಳಿಂದ ದೂರಾದವನೆಂಬುದು ಆತನ ಸತ್ ಸ್ವರೂಪ. ಚಿತ್ ಎಂಬುದು ತ್ರಿಗುಣಾತೀತವಾದ ಚೈತನ್ಯ. ಆನಂದವೆಂಬುದೂ ಆತನ ಸ್ವರೂಪವೇ. ಈಶ್ವರನ ಆನಂದ ಸ್ವರೂಪವನ್ನು ವಿದ್ಯಾರಣ್ಯರ ಪಂಚದಶಿ **'ಅಯಮಾತ್ಮಾ ಪರಾನಂದಃ ಪರಮ ಪ್ರೇಮಾಸ್ಪದಃ ಯತಃ'** ಎನ್ನುತ್ತದೆ. ಈ ಆತ್ಮನು ಉತ್ಕೃಷ್ಟ ಆನಂದ ಸ್ವರೂಪ, ಪರಮ ಪ್ರೀತಿಪಾತ್ರನು ಎಂಬುದು ಇದರ ಅರ್ಥ.

ಶಿವಾಷ್ಟೋತ್ತರದಲ್ಲಿ ಮೊದಲ ನಾಮ ಶಿವಾಯನಮಃ. ಎಂದರೆ ಶಿವನಿಗೆ ನಮಸ್ಕಾರ ಎಂದು. ಆದ್ದರಿಂದಲೇ ಭಾಗವತರು ಶಿವ ಎಂದು ಆರಂಭಮಾಡಿ ನಮೋಸ್ತುತೇ ಎಂದು ಕೃತಿಯನ್ನು ಅಂತ್ಯಮಾಡಿದ್ದಾರೆ. ಕೃತಿಯೂ ಮಂಗಳಕರವಾದ ಕಲ್ಯಾಣಿರಾಗದಲ್ಲೇ ಇದೆ. ಕಲ್ಯಾಣಿ 65ನೇ ಮೇಳರಾಗ. ಬಹುಪ್ರಸಿದ್ಧವಾದ, ಸುಂದರವಾದ, ಸಾರ್ವಕಾಲಿಕವಾದ ಪ್ರತಿಮಧ್ಯಮ ರಾಗವಿದು. ಅಧಿಕ ಸಂಖ್ಯೆಯ ರಚನೆಗಳು ಈ ರಾಗದಲ್ಲಿ ಲಭ್ಯವಿವೆ. ಕೃತಿಯ ಸಾಹಿತ್ಯದಲ್ಲಿ ಭಯಹರ, ಮನೋಹರ, ದಯಾಕರ, ಪ್ರಿಯಕರ, ಶೇಖರ ಎಂಬ 'ರ' ಅಂತ್ಯಪದಗಳ ಪ್ರಯೋಗವೂ ಸುಂದರ ಚಿಟ್ಟೆಸ್ವರವೂ ಅಳವಟ್ಟಿದೆ. ರಾಗದ ಆರೋಹಣ ಅವರೋಹಣಗಳು, **ಸ ರಿ ಗ ಮ ಪ ದ ನಿ ಸ - ಸ ನಿ ದ ಪ ಮ ಗ ರಿ ಸ.**

———o ———

ಮಹೇಶ್ವರಾಯ ನಮಃ

## 2. ಹರಮಹೇಶ್ವರ ಪರಿಪಾಲಯ

**ರಾಗ – ಬೇಗಡೆ** **ಆದಿತಾಳ**

**ಹರಮಹೇಶ್ವರ ಪರಿಪಾಲಯ।**
**ಪರಮಪುರುಷ ಪಾರ್ವತೀರಮಣ**
**ಕರಿಚರ್ಮಾಂಬರ ಕರುಣಾಸಾಗರ॥**
**ಸಕಲದೇವ ವಂದಿತ ಪದಯುಗ**
**ಸಕಲಲೋಕ ಮೂಲಾಧಾರ**
**ಸಕಲಮಂತ್ರ ಆದಿಕಾರಣ**
**ಸಕಲ ವೇದಸಾರ ಶ್ರೀಹರಿಕೇಶ॥**

ಪುರುಷೋತ್ತಮನೂ, ಪಾರ್ವತೀರಮಣನೂ, ಕರಿಚರ್ಮಾಂಬರಧಾರಿಯೂ, ಕೃಪಾನಿಧಿಯೂ ಆದ ಮಹೇಶ್ವರನ ಔನ್ನತ್ಯವನ್ನು ಈ ಕೃತಿಯಲ್ಲಿ ವ್ಯಕ್ತಪಡಿಸಿ ತಮ್ಮನ್ನು ಅನವರತ ರಕ್ಷಿಸುವಂತೆ ಕೃತಿಕರ್ತರು ಪ್ರಾರ್ಥಿಸಿದ್ದಾರೆ. ಈಶ್ವರನ ಔನ್ನತ್ಯಕ್ಕೆ ಸಂಬಂಧಿಸಿದಂತೆ ಅನೇಕ ಮಾಹಿತಿಗಳುಂಟು. ಅವುಗಳಲ್ಲಿ ಕೆಲವೆಂದರೆ,

1) **ಸರ್ವದೇವಾತ್ಮಕೋ ರುದ್ರಃ । ಸರ್ವೇ ದೇವಾಃ ಶಿವಾತ್ಮಕಾಃ॥**

ಎನ್ನುತ್ತದೆ ರುದ್ರ ಹೃದಯೋಪನಿಷತ್ತು. ಇದರ ಅರ್ಥ ರುದ್ರನು ಎಲ್ಲ ದೇವತೆಗಳ ಸ್ವರೂಪ, ಎಲ್ಲ ದೇವತೆಗಳೂ ಶಿವನ ಸ್ವರೂಪ.

2) ಈಶ್ವರನೇ ಚತುರ್ಮುಖನ ಉತ್ಪತ್ತಿಗೂ ಕಾರಣನೆಂದು ಶ್ವೇತಾಶ್ವತರ ಉಪನಿಷತ್ತು ಹೇಳುತ್ತದೆ.

**ಯೋ ದೇವಾನಾಂ ಪ್ರಭವಶ್ಚೋದ್ಭವಶ್ಚ**
**ವಿಶ್ವಾಧಿಪೋ ರುದ್ರೋ ಮಹರ್ಷಿಃ**
**ಹಿರಣ್ಯ ಗರ್ಭಂ ಜನಯಾಮಾಸ ಪೂರ್ವಂ**
**ಸನೋ ಬುಧ್ಯಾ ಶುಭಯಾ ಸಂಯುನಕ್ತು।**

3) ಚತುರ್ಮುಖನು ಈ ಪ್ರಪಂಚವನ್ನು ಸೃಷ್ಟಿಮಾಡುವ ಮುನ್ನ ಶಿವನನ್ನು ಉಪಾಸಿಸಿ ಅವನ ಅನುಗ್ರಹವನ್ನು ಪಡೆದೇ ಸೃಷ್ಟಿಸಾಮರ್ಥ್ಯವನ್ನು ಪಡೆದನೆಂದು ದಕ್ಷಿಣಾಮೂರ್ತಿ ಉಪನಿಷತ್ತು ಹೇಳುತ್ತದೆ.

4) ಶರಭೋಪನಿಷತ್ತು ಮತ್ತೊಂದು ಹೆಜ್ಜೆ ಮುಂದುವರೆದು ಬ್ರಹ್ಮ, ವಿಷ್ಣುಗಳಿಬ್ಬರೂ ಜೊತೆಗೂಡಿ ಶಿವನ ಪಾದಗಳನ್ನು ಬಯಸಿ ಉಪಾಸಿಸುತ್ತಾರೆ ಎನ್ನುತ್ತದೆ.

**ಯತ್ಪಾದಾಂಭೋರುಹದ್ವಂದ್ವಂ।**
**ಮೃಗ್ಯತೇ ವಿಷ್ಣುನಾ ಸಹ॥**

5) ಈಶ್ವರನೇ ಪಂಚಮುಖಿಗಳಿದ್ದ ಬ್ರಹ್ಮನನ್ನು ಚತುರ್ಮುಖನಾಗಿಸಿ, ದೇವಾಧಿದೇವತೆಗಳಿಂದಾಗಲೀ, ಭೂಲೋಕದ ಜೀವರಿಂದಾಗಲೀ ಪೂಜೆ ನಡೆಯದಂತೆ ಶಾಪನೀಡಿದವನು.

6) ಬ್ರಹ್ಮ ವಿಷ್ಣುಗಳಿಗೆ ಸೃಷ್ಟಿ, ಸ್ಥಿತಿ ಕಾರ್ಯಗಳನ್ನು ನಿಗದಿಪಡಿಸಿ ತಾನು ಲಯಕಾರ್ಯವನ್ನು ತನ್ನಲ್ಲಿಯೇ ಉಳಿಸಿಕೊಂಡವನು. ಇಲ್ಲಿ ಲಯವೆಂದರೆ ವಿನಾಶವೆಂದು ಅರ್ಥವಲ್ಲ. ಈಶ್ವರನು ಇಡೀ ಬ್ರಹ್ಮಾಂಡವನ್ನು ತನ್ನಲ್ಲೇ ಹುದುಗಿಸಿಕೊಂಡಿರುವ ಸ್ಥಿತಿ ಅದು. ಆತ ಸೃಷ್ಟಿಕಾಲದಲ್ಲಿ ಬ್ರಹ್ಮಾಂಡವನ್ನು ಪುನಃ ವ್ಯಕ್ತಗೊಳಿಸುತ್ತಾನಷ್ಟೆ. ಈ ಎಲ್ಲ ನಿಟ್ಟಿನಿಂದ ಅವಲೋಕಿಸಿದಾಗ ಪರಮೇಶ್ವರನು ಸಕಲಲೋಕಕ್ಕೂ ಮೂಲಾಧಾರನೂ, ಸಕಲ ಮಂತ್ರಗಳ ಆದಿಕಾರಣನೂ, ಸಕಲದೇವ ವಂದ್ಯನೂ, ಸಕಲ ವೇದಸಾರನೂ ಆಗಿದ್ದಾನೆ. ಪ್ರಸಕ್ತ ಈ ಅಂಶವನ್ನು ಮುತ್ತಯ್ಯಭಾಗವತರು ಹರಮಹೇಶ್ವರ ಎಂದು ಆರಂಭವಾಗುವ ಈ ಕೃತಿಯಲ್ಲಿ ಸಕಲ ಎಂಬ ಪದವನ್ನು ನಾಲ್ಕು ಬಾರಿ ಅಳವಡಿಸಿ ಪರಮೇಶ್ವರನ ಔನ್ನತ್ಯವನ್ನು ವಿಶದಪಡಿಸುತ್ತಾರೆ. ಕೃತಿಗೆ ಸುಂದರವಾದ ಚಿಟ್ಟೆಸ್ವರವೂ ಇದೆ.

ಬೇಗಡೆ ರಾಗವು 29ನೇ ಧೀರ ಶಂಕರಾಭರಣದಲ್ಲಿ ಜನ್ಯವಾದ ಪ್ರಸಿದ್ಧರಾಗ. ಇದರ ಆರೋಹಾವರೋಹಗಳು, **ಸ ಗ ರಿ ಗ ಮ ಪ ದ ಪ ಸ – ಸ ನೀ ದ ಪ ಮಾ ಗ ರಿ ಸ.** ಈ ರಾಗದಲ್ಲಿ ಮಧ್ಯಮ ನಿಷಾದಗಳ ಪ್ರಯೋಗ ವಿಶೇಷವಾದುದು. ಇವು ಬೇಗಡೆ ಮಧ್ಯಮ, ಬೇಗಡೆ ನಿಷಾದಗಳೆಂದೇ ಪ್ರಸಿದ್ಧ. **ದನಿಸ** ವಿಶೇಷ ಪ್ರಯೋಗ. ಅಭ್ಯಾಸಗಾನದ ಗೀತೆಯಿಂದ ಮೊದಲ್ಗೊಂಡು ಎಲ್ಲ ವಿಧದ ರಚನೆಗಳನ್ನು ಈ ರಾಗದಲ್ಲಿ ಕಾಣಬಹುದು. ಬೇಗಡೆ ಮೀಗಡ ಎಂಬುದು ಪ್ರಸಿದ್ಧೋಕ್ತಿ. ಮೀಗಡ ಎಂಬ ತೆಲುಗು ಪದ ಕೆನೆ ಎಂಬ ಅರ್ಥ ಉಳ್ಳದ್ದು. ಸುಪ್ರಸಿದ್ಧ ವಾಗ್ಗೇಯಕಾರರಾದ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ ಅವರು ಈ ರಾಗ ಪ್ರಸ್ತುತಿಯಲ್ಲಿ ವಿಶೇಷ ಪಾಂಡಿತ್ಯ ಹೊಂದಿದ್ದರೆಂದು ಅವರನ್ನು ಬೇಗಡೆ ಸುಬ್ರಹ್ಮಣ್ಯ ಅಯ್ಯರ್ ಎಂದೂ ಗುರುತಿಸುತ್ತಿದ್ದರೆಂಬುದನ್ನು ನಾವಿಲ್ಲಿ ಸ್ಮರಿಸಬಹುದು.

———o———

ಶಂಭವೇ ನಮಃ

## 3. ಪರಮಪುರುಷ ಶಂಭೋ

**ರಾಗ – ಪಾಡಿ** **ಆದಿತಾಳ**

**ಪರಮಪುರುಷ ಶಂಭೋ ಪಾರ್ವತೀಶ ಪಾಲಯಮಾಂ।**
**ಪರಾತ್ಪರ ಪಾವನ ನಿರಾಮಯಾ ನೀಲಕಂಠ।**
**ಗಂಗಾಧರ ಚಂದ್ರಚೂಡ ಗಿರಿನಿಲಯಾಚ್ಯುತವಂದ್ಯ।**
**ಭೃಂಗ್ಯಾದಿ ಪೂಜಿತಪದ ಪ್ರಭೋ ಹರಿಕೇಶವಿಭೋ॥**

ಮುತ್ತಯ್ಯಭಾಗವತರ ಶ್ರೀಚಾಮುಂಡಾಂಬಾಷ್ಟೋತ್ತರಶತ ಕೃತಿಗಳಲ್ಲಾಗಲೀ, ಶ್ರೀ ಶಿವಾಷ್ಟೋತ್ತರಶತ ಕೃತಿಗಳಲ್ಲಾಗಲೀ ಬಹುಮಟ್ಟಿಗೆ ಪರಿಪಾಹಿ, ಪಾಲಯಮಾಂ, ಪಾಹಿ, ಮಾಮವ, ವಂದೇ ಎಂಬಂಥ ಪದವೊಂದನ್ನುಳಿದರೆ ಮಿಕ್ಕೆಲ್ಲವೂ ಸ್ತುತಿಗಾಗಿ ಅಳವಟ್ಟ ಸಾಹಿತ್ಯ ಎನಿಸುತ್ತದೆ. ಪ್ರಸ್ತುತ ಶಿವಾಷ್ಟೋತ್ತರಶತ ಕೃತಿಗಳಲ್ಲೂ ಹೀಗೆಯೇ ಇದ್ದು ಈಶ್ವರನ ವಿವಿಧ ನಾಮಗಳ ಅಳವಡಿಕೆ ನಮ್ಮನ್ನು ಸೆಳೆಯುತ್ತವೆ. ಪುರಾಣ ಪ್ರಕಾರ ಮಹೇಶ್ವರನಿಗೆ ಪರ್ಯಾಯ ನಾಮಗಳು ಹಲವು. ರುದ್ರ, ಉಗ್ರ, ಧೂರ್ಜಟಿ ಮುಂತಾದವು ಅವನ ಉಗ್ರಸ್ವರೂಪವನ್ನು ವ್ಯಕ್ತಪಡಿಸುತ್ತವೆ. ಈ ವಿವಿಧ ಹೆಸರುಗಳು ಅನೇಕ ಪುರಾಣಗಳಲ್ಲಿ ಬರುತ್ತವೆ. ವಾಸ್ತವವಾಗಿ ಭಾರತೀಯ ದೇವತಾವರ್ಗದಲ್ಲಿ ಹೆಚ್ಚಿನ ಮಹಿಮೆಯುಳ್ಳ ದೇವರು ಶಿವನೇ. ಹೀಗಾಗಿ ಭಾರತೀಯ ಸಾಹಿತ್ಯದಲ್ಲಿ ಹೆಚ್ಚಿನ ಭಾಗ ಶಿವನಿಗಾಗಿಯೇ ಮೀಸಲಾಗಿದೆಯೆಂದರೆ ಅತಿಶಯೋಕ್ತಿಯಾಗಲಾರದು. ಪ್ರಸ್ತುತ ಪರಮಪುರುಷ ಕೃತಿಯಲ್ಲಿ ಶಂಭೋ ಪಾರ್ವತೀಶ, ನೀಲಕಂಠ, ಗಂಗಾಧರ, ಚಂದ್ರಚೂಡ, ಗಿರಿನಿಲಯ ಎಂಬಂಥ ನಾಮಗಳನ್ನು ಅಳವಡಿಸಲಾಗಿದೆ. ನಾಮಸಂಕೀರ್ತನೆಯ ಜೊತೆಯಲ್ಲಿ ನನ್ನನ್ನು ರಕ್ಷಿಸು ಎಂಬ ಪ್ರಾರ್ಥನೆಯಿದೆ.

ಭಕ್ತ ಪ್ರಹ್ಲಾದನು ಭಾಗವತದ ದಶಮಸ್ಕಂದದಲ್ಲಿ ನವವಿಧ ಭಕ್ತಿಯನ್ನು ಹೀಗೆ ಹೇಳುತ್ತಾನೆ,

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ**
**ಅರ್ಚನಂ ವಂದನಂ ದಾಸ್ಯಂ ಸಖ್ಯಂ ಅತ್ಮನಿವೇದನಂ**

ಇವು ಒಂದು ಮತ್ತೊಂದಕ್ಕೆ ಪೂರಕ. ಅದರಲ್ಲೂ ಕೀರ್ತನ ಭಕ್ತಿಯ ಹಿರಿಮೆಯನ್ನು ವಿಷ್ಣುಪುರಾಣದಲ್ಲಿ ಒತ್ತಿಹೇಳಲಾಗಿದೆ. ಯಜ್ಞಗಳ ಮೂಲಕ ಒಬ್ಬನು ಯಾವ ಫಲವನ್ನು ಪಡೆಯುತ್ತಾನೋ ಅದೇ ಫಲವನ್ನು ಕಲಿಯುಗದಲ್ಲಿ ನಾಮಸಂಕೀರ್ತನೆಯಿಂದ ಪಡೆಯಬಹುದಾಗಿದೆ ಎಂಬುದು ಇಲ್ಲಿನ ಭಾವ. ವಿಷ್ಣು ಸಹಸ್ರನಾಮದಲ್ಲೂ ಪುರುಷೋತ್ತಮನ ಗುಣಕೀರ್ತನೆಯ ಮಹತ್ವವನ್ನು ಹೇಳಲಾಗಿದೆ.

ನಾಮಸಂಕೀರ್ತನೆಯಲ್ಲಿ ದೇವರ ಬೇರೆ ಬೇರೆ ನಾಮಗಳನ್ನು ಅಥವಾ ವಿಶೇಷಣಗಳನ್ನು ಸ್ತುತಿಸುವುದು ಒಂದು ವಿಧ. ಇದನ್ನು ಸಂಗೀತದೊಂದಿಗೂ ಆಚರಿಸಬಹುದು. ಇದನ್ನೇ ನಮ್ಮೆಲ್ಲ ವಾಗ್ಗೇಯಕಾರರೂ ಆಚರಿಸಿರುವುದು. ಇದರಿಂದ ಮುತ್ತಯ್ಯಭಾಗವತರೂ ಹೊರತೆನಿಸಿಲ್ಲ.

ಪುರುಷೋತ್ತಮನಾದ ಶಂಭುವನ್ನು, ಪಾರ್ವತೀಶನನ್ನು, ನೀಲಕಂಠನನ್ನು, ಅಚ್ಯುತನಿಂದ ವಂದಿಸಲ್ಪಟ್ಟವನನ್ನು, ಭೃಂಗಾದಿಗಳಿಂದ ಪೂಜಿಸಲ್ಪಟ್ಟ ಪಾವನನನ್ನು ಕೃತಿಕರ್ತರು ತಮ್ಮನ್ನು ಪಾಲಿಸುವಂತೆ ಪ್ರಾರ್ಥಿಸಿದ್ದಾರೆ,

ಕೃತಿಯು ಪಾಡಿರಾಗ ಆದಿತಾಳದಲ್ಲಿ ರೂಪುಗೊಂಡಿದೆ. ಪಾಡಿಯು 15ನೇ ಮಾಯಾಮಾಳವಗೌಳದಲ್ಲಿ ಉಪಾಂಗ ಜನ್ಯ. ಆರೋಹಾವರೋಹಗಳು, **ಸ ರಿ ಮ ಪ ನಿ ಸ** ಅಥವಾ **ಸ ರಿ ಮ ಪ ದ ಪ ನಿ ಸ. ಸ ನಿ ಪ ದಾ ಪ ಮ ರಿ ಸ.** ಹಿಂದೂಸ್ಥಾನೀ ಸಂಗೀತ ಪದ್ಧತಿಯ ಪಹಾಡಿ ರಾಗಕ್ಕೂ ಕರ್ನಾಟಕ ಸಂಗೀತ ಪದ್ಧತಿಯ ಪಾಡಿ ರಾಗಕ್ಕೂ ಯಾವುದೇ ಸಾಮ್ಯತೆ ಇಲ್ಲ. ನಮ್ಮ ಪಾಡಿ ರಾಗವು ಹಿಂದೆ ಪ್ರಸಿದ್ಧ ರಾಗವೆನಿಸಿದ್ದರೂ ಆನಂತರ ಇತರ ರಾಗಗಳ ಬಳಕೆಯಿಂದ ಹಿಂದುಳಿದಿದೆ. ಸಂಗೀತ ಚರಿತ್ರೆಯ ಪರ್ವಕಾಲದ ತ್ರಿಮೂರ್ತಿಗಳಲ್ಲಿ ಒಬ್ಬರಾದ ಮುತ್ತುಸ್ವಾಮಿದೀಕ್ಷಿತರು **ಶ್ರೀಗುರುಣಾಪಾಲಿತೋಸ್ಮಿ** ಎಂಬ ರಚನೆಯೊಂದನ್ನು ಪಾಡಿರಾಗ ರೂಪಕತಾಳದಲ್ಲಿ ರಚಿಸಿದ್ದಾರೆ.

———o———

ಪಿನಾಕಿನೇ ನಮಃ

## 4. ಪಿನಾಕಿನೇ ಮಹಾಪ್ರಭವೇ

ರಾಗ – ಬೃಂದಾವನಸಾರಂಗ ಆದಿತಾಳ

ಪಿನಾಕಿನೇ ಮಹಾಪ್ರಭವೇ ನಮಃ।
ಪಿಂಗಳಾಯ ಪ್ರಿಯಕರಾಯ ಶ್ರೀ॥
ಮಾನಿತಲೋಕಾಯ ಮಾಧವ ಸೇವಿತಾಯ।
ಗಾನಲೋಲಾಯ ಕರುಣಾಶೀಲಾಯ॥
ವೇದವೇದ್ಯಾಯ ವಿಶ್ವಾರಾಧ್ಯಾಯ।
ನಾದರೂಪಾಯ ನಂದಿವಾಹಾಯ।
ಮೋದಹೃದಯಾಯ ಮೋಕ್ಷಪ್ರದಾಯ
ಆದಿನಾಥಾಯ ಹರಿಕೇಶಾಯ॥

'ಪಿನಾಕಿನೇ ನಮಃ' ಎಂಬುದು ಶ್ರೀಶಿವಾಷ್ಟೋತ್ತರದಲ್ಲಿ ನಾಲ್ಕನೆಯ ನಾಮವಾಗಿದ್ದು ಶಿವನಿಗೆ ವಂದನೆಗಳನ್ನು ಸಲ್ಲಿಸುವುದಾಗಿದೆ. ಮುತ್ತಯ್ಯಭಾಗವತರು ಈ ರಚನೆಯಲ್ಲಿ ಪಿನಾಕಿಯನ್ನೇ ಹೆಸರಿಸಿ ನಮಸ್ಕರಿಸುತ್ತಿದ್ದಾರೆ. ಶಿವಧನುಸ್ಸಿಗೆ ಪಿನಾಕ ಎಂದು ಹೆಸರು. **'ಪಾತಿ ಕ್ಷತಿ ಇತಿ ಪಿನಾಕಃ'** ಎನ್ನುವುದುಂಟು. ಪಿನಾಕವನ್ನುಳ್ಳವನೇ ಪಿನಾಕಿ. ಈತ ವಿಶ್ವಮಾನ್ಯನೂ, ಮಾಧವನಿಂದ ಸೇವಿಸಲ್ಪಟ್ಟವನೂ, ಕರುಣಾಶೀಲನೂ, ನಂದಿಯನ್ನು ವಾಹನವಾಗಿ ಉಳ್ಳವನೂ, ಆದಿನಾಥನೂ ಆಗಿದ್ದಾನೆ. ಕೃತಿ ಸಾಹಿತ್ಯದ ಇತರ ಮುಖ್ಯ ಅಂಶಗಳೆಂದರೆ ಈಶ್ವರನು ನಾದರೂಪಿ, ಗಾನಲೋಲನಾಗಿರುವುದು. ಇದು ಸಂಗೀತಕ್ಕೂ ಈಶ್ವರನಿಗೂ ಇರುವ ಅವಿನಾಭಾವ ಸಂಬಂಧವನ್ನು ತಿಳಿಸುತ್ತದೆ. ಈಶ್ವರನು ಸಂಗೀತರೂಪಿ, ಸಂಗೀತಲೋಲ, ಗಾನಲೋಲ ಮುಂತಾದ ಅಂಶಗಳನ್ನು ತ್ಯಾಗರಾಜರೂ ನಾದಯೋಗಕ್ಕೆ ಸಂಬಂಧಿಸಿದ ತಮ್ಮ ಬೇರೆ ಬೇರೆ ರಚನೆಗಳಲ್ಲಿ ತಿಳಿಸಿದ್ದಾರೆ ಎಂಬುದನ್ನು ಪ್ರಾಸಂಗಿಕವಾಗಿ ನಾವಿಲ್ಲಿ ಸ್ಮರಿಸಬಹುದು.

ಭಕ್ತಿಯ ಗುರಿ, ಮುಕ್ತಿ ಎನ್ನುವುದುಂಟು. ಮುಕ್ತಿಯು ಮೋಕ್ಷ, ಕೈವಲ್ಯಗಳೆಂಬ ಪದಗಳಿಂದಲೂ ಕರೆಯಲ್ಪಟ್ಟಿದೆ. ಅದ್ವೈತ, ದ್ವೈತ ಮತ್ತು ವಿಶಿಷ್ಟಾದ್ವೈತಗಳೆಂಬ ಹಿಂದೂ ಮತದರ್ಶನದಲ್ಲಿ ಮೋಕ್ಷ ಎಂಬುದು ಬೇರೆ ಬೇರೆ ರೀತಿಯಲ್ಲಿ ಅರ್ಥೈಸಲ್ಪಡುತ್ತದೆಯಾದರೂ ಮೋಕ್ಷ ಎಂಬುದನ್ನು ಇವೆಲ್ಲವೂ ಅಂಗೀಕರಿಸಿದೆ. ಪ್ರಸ್ತುತ ಕೃತಿಯಲ್ಲಿ ಭಾಗವತರು ಈಶ್ವರನನ್ನು ಮುಕ್ತಿಪ್ರದನೆಂದು ಹೇಳಿರುವುದು ಗಮನಿಸಬೇಕಾದ ಅಂಶ.

ಇನ್ನು ಭಗವಂತನನ್ನು ನಾದರೂಪಿ ಎನ್ನುವಾಗ ನಾದದಿಂದ ವರ್ಣ, ವರ್ಣದಿಂದ ಪದ, ಪದದಿಂದ ವಾಕ್ಕು, ವಾಕ್ಕಿನಿಂದ ಸಮಸ್ತ ಲೋಕವ್ಯವಹಾರ – ಹೀಗಾಗಿ ಜಗತ್ತಿನ ಎಲ್ಲ ವ್ಯವಹಾರಗಳಿಗೂ ನಾದರೂಪಿಯಾದ ಪರಮೇಶ್ವರನೇ ಆದಿಪ್ರವರ್ತಕನಾಗುತ್ತಾನೆ. ನಾದವಿಲ್ಲದೆ ಗೀತವಿಲ್ಲ, ನಾದವಿಲ್ಲದೆ

ಶಶಿಶೇಖರಾಯ ನಮಃ

## 5. ಶಶಿಶೇಖರ ಸಾಂಬಸದಾಶಿವ

ರಾಗ – ಪೂರ್ಣಚಂದ್ರಿಕೆ ಆದಿತಾಳ

ಶಶಿಶೇಖರ ಸಾಂಬ ಸದಾಶಿವ।
ಪಶುಪತೇ ಶ್ರೀ ಪಾರ್ವತೀ ನಾಯಕ। ನಿಶಿಚರಕಾಲ। ನಿಜಭಕ್ತಪಾಲ॥
ಮೃಗಧರ ಗಂಗಾಧರ ಜಟಾಧರ ನಗಧರ ಶಶಿಧರ ರಮಣೀಧರ ಹರ
ಖಗವಾಹನಾದಿ ಸೇವಿತ ಪಾದ ನಿಗಮಾಲಯ ಶ್ರೀಹರಿಕೇಶ॥

ಸಂಗೀತಮಾಧ್ಯಮದ ಮೂಲಕ ಭಗವನ್ನಾಮಸಂಕೀರ್ತನೆ ಮಾಡಿರುವ ಹಿಂದಿನ ವಾಗ್ಗೇಯಕಾರರನ್ನೇ ಇಲ್ಲಿ ಭಾಗವತರೂ ಅನುಕರಿಸಿದ್ದಾರೆ. ಪ್ರಸ್ತುತ ರಚನೆಯಲ್ಲಿ ಅವರು ಯಾವುದೇ ಬೇಡಿಕೆಯನ್ನು ಭಗವಂತನ ಮುಂದಿಡದೆ ಅವನ ನಾಮಸಂಕೀರ್ತನೆಯನ್ನಷ್ಟೇ ಈ ಕೃತಿಯಲ್ಲಿ ಮಾಡಿದ್ದಾರೆ. ನಾಮಸಂಕೀರ್ತನೆಗೆ ಉತ್ತಮವಾದ ಒಂದು ಉದಾಹರಣೆ ಈ ಕೃತಿ. ಇಲ್ಲಿನ ಈಶ್ವರನು ಚಂದ್ರಶೇಖರನಾಗಿದ್ದಾನೆ. ಆದ್ದರಿಂದಲೇ ಕೃತಿಗೆ ಪೂರ್ಣಚಂದ್ರಿಕೆ ರಾಗವನ್ನು ಅಳವಡಿಸಲಾಗಿದೆ. ಈ ಮೂಲಕ ಸಾಹಿತ್ಯ ಮತ್ತು ರಾಗದ ಅಳವಡಿಕೆಯಲ್ಲಿ ಸಾಮ್ಯತೆ ತರಲಾಗಿದೆ. ಪರಮೇಶ್ವರನು ರಾತ್ರಿಯಲ್ಲಿ ಸಂಚರಿಸುವ ದುಷ್ಟರಿಗೆ ಯಮಸದೃಶನೂ, ನಿಜಭಕ್ತರಿಗೆ ಪಾಲಕನೂ, ಸಾಂಬನೂ, ಪಶುಪತಿಯೂ ಆಗಿದ್ದಾನೆ. ಪಾಶುಪತ ಎಂಬುದು ಶಿವನಿಗೆ ಸಂಬಂಧಿಸಿದ ಬಾಣ, ಇದನ್ನುಳ್ಳವನೇ ಪಶುಪತಿ. ಕಾರ್ತಿಕೇಯನಿಗೂ ಅರ್ಜುನನಿಗೂ ಈಶ್ವರನು ಈ ಬಾಣವನ್ನು ನೀಡಿದಂತೆ ಮಾಹಿತಿಯುಂಟು. ಶ್ರೀವಿಷ್ಣುವಿನಿಂದ ಸೇವಿಸಲ್ಪಟ್ಟ ಪಾದವುಳ್ಳ, ವೇದಗಳಲ್ಲಿ ನೆಲೆಸಿರುವ ಶಶಿಶೇಖರನ ನಾಮಸ್ಮರಣೆ ಇಲ್ಲಿದೆ. ಚರಣದ ಸಾಹಿತ್ಯದಲ್ಲಿ ಅಳವಟ್ಟ ಮೃಗಧರ, ಗಂಗಾಧರ, ಜಟಾಧರ, ನಗಧರ, ಶಶಿಧರ, ರಮಣೀಧರ ಎಂಬಂಥ ಶಿವನ ನಾಮಗಳ ಜೋಡಣೆ ಗಾಯನವಿಲ್ಲದೆ ಓದಿದಾಗಲೂ ಖುಷಿ ನೀಡುತ್ತದೆ.

'ಶಶಿಶೇಖರಾಯ ನಮಃ' ಎಂಬುದು ಶಿವಾಷ್ಟೋತ್ತರದಲ್ಲಿ ಐದನೆಯ ನಾಮ. ಅಂತೆಯೇ ಕೃತಿಯೂ ಶಶಿಶೇಖರ ಎಂದೇ ಆರಂಭವಾಗಿದೆ. ಚಿಕ್ಕದಾದ ಚಿಟ್ಟೆಸ್ವರವೊಂದು ಕೃತಿಗೆ ಅಳವಟ್ಟಿದೆ.

ಕೃತಿಗೆ ಸಂಯೋಜಿಸಲಾದ ಪೂರ್ಣಚಂದ್ರಿಕೆ ರಾಗವು 29ನೇ ಮೇಳ ಶಂಕರಾಭರಣದಲ್ಲಿ ಉಪಾಂಗಜನ್ಯ. ಆರೋಹಾವರೋಹಗಳು **ಸ ರಿ ಗ ಮ ಪ ದ ಪ ಸ – ಸ ನಿ ಪ ಮ ರಿ ಗ ಮ ರಿ ಸ,** ಮುತ್ತುಸ್ವಾಮಿದೀಕ್ಷಿತರ ಪ್ರಯೋಗದಂತೆ ಇದು, **ಸ ರಿ ಗ ಮ ಪ ದ ನಿ ಸ – ಸ ನಿ ಪ ಮ ಗ ಮ ರೀ ಸ** ಎಂದೆನಿಸಿ ಶಂಕರಾಭರಣದಲ್ಲೇ ಜನ್ಯವಾಗಿದೆ. ಮುತ್ತುಸ್ವಾಮಿದೀಕ್ಷಿತವಿರಚಿತ **ಶಂಕಚಕ್ರಗಧಾಪಾಣಿಂ,** ಶ್ಯಾಮಾಶಾಸ್ತ್ರಿವಿರಚಿತ **ನನ್ನುಬ್ರೋವರಾದಾ,** ಪಟ್ನಂ ಸುಬ್ರಹ್ಮಣ್ಯ ಅಯ್ಯರ್‌ವಿರಚಿತ **ಇಕನೇಲ ಅಟ್ಟತಾಳವರ್ಣ, ಪಂಚನದೀಶಪಾಹಿಮಾಂ,** ತ್ಯಾಗರಾಜವಿರಚಿತ **ಪಲುಕವೇಮಿ ನಾ ದೈವಮಾ, ತೆಲಿಸಿರಾಮಚಿಂತನತೋ,** ರಾಂನಾಡು ಶ್ರೀನಿವಾಸ ಅಯ್ಯಂಗಾರ್‌ವಿರಚಿತ **ತೋಂ ತೋಂ ತದರ** ತಿಲ್ಲಾನಗಳು ಈ ರಾಗದ ಕೆಲವು ಪ್ರಮುಖ ರಚನೆಗಳು.

ವಾಮದೇವಾಯ ನಮಃ

## 6. ವಾಮದೇವ ಮಹಾನುಭಾವ

ರಾಗ – ಮೋಹನ ಆದಿತಾಳ

ವಾಮದೇವ ಮಹಾನುಭಾವ
ಮಾಂ ಪಾಲಯ ಕೃಪಾಕರ ಶಂಕರ।
ಸೋಮಶೇಖರ ಶುಭ ಸುಕುಮಾರ ಶರೀರ
ಕಾಮಮದನ ಶ್ರೀಕಂಠ ಸಚ್ಚಿದಾನಂದ॥
ನಾಗಾಭರಣ ನಾಗಚರ್ಮಾಂಬರ
ನಾರದಮುನಿಗೇಯ ರಾಜಕಲಾಧರ
ಭೋಗಿಶಯನಕರಪೂಜಿತ ಪದಯುಗ
ವಾಗೀಶಾದ್ಯಮರ ವಂದಿತ ಹರಿಕೇಶ ॥

ಈ ಕೃತಿಯಲ್ಲಿ ವಾಗ್ಗೇಯಕಾರ ಮುತ್ತಯ್ಯಭಾಗವತರು ತಮ್ಮನ್ನು ಪಾಲಿಸುವಂತೆ ಕೋರುತ್ತಿದ್ದಾರೆ. ಮಹಾನುಭಾವ, ಸೋಮಶೇಖರ, ಸುಕುಮಾರಶರೀರಿ ಶ್ರೀಕಂಠನಲ್ಲಿ ಅವರ ಪ್ರಾರ್ಥನೆ ತಮ್ಮನ್ನು ರಕ್ಷಿಸಬೇಕೆಂಬುದು. ಸರ್ಪಭೂಷಣನಾಗಿ, ಆನೆಯ ಚರ್ಮಧರಿಸಿದ, ನಾರದರಿಂದ ಸ್ತುತಿಸಲ್ಪಟ್ಟ, ರಾಜನ ವೇಷ–ಭೂಷಣಗಳಿಂದಲಂಕೃತನಾದ, ಶ್ರೀವಿಷ್ಣುವಿನಿಂದ ಪೂಜಿಸಲ್ಪಟ್ಟ ಪಾದಗಳುಳ್ಳ ಈಶ್ವರನ ಪ್ರಸ್ತಾಪ ಈ ಕೃತಿಯಲ್ಲಿದೆ. ನಾಗ ಪದವು ಹಾವು ಹಾಗೂ ಆನೆ ಎಂಬ ಎರಡು ಅರ್ಥಹೊಂದಿದ್ದು ಇವೆರಡನ್ನೂ ಕರ್ತೃ ಸುಂದರವಾಗಿ ಬಳಸಿದ್ದಾರೆ. ಅಂತೆಯೇ ನಾಗ–ಭೋಗಿ ಇವೆರಡೂ ಸಮಾನಾರ್ಥಕ ಪದಗಳಾಗಿವೆ. ಚಂದ್ರನನ್ನು ಧರಿಸಿದವನೆಂಬುದನ್ನು, ಸೋಮಶೇಖರ, ಶಶಿಶೇಖರ, ಚಂದ್ರಶೇಖರ, ಚಂದ್ರಧರ ಮುಂತಾದ ಪರ್ಯಾಯ ಪದಗಳಿಂದ ಈ ಕೃತಿಗುಚ್ಛದಲ್ಲಿ ಬಳಸಲಾಗಿದೆ. ಈಶ್ವರನು ವೈರಾಗ್ಯಮೂರ್ತಿ ಎಂಬ ಭಾವವಿದ್ದರೂ ಮುತ್ತಯ್ಯಭಾಗವತರು ಇಲ್ಲಿ ಆತನನ್ನು ರಾಜಾಲಂಕಾರದಲ್ಲಿ ಕಂಡಿದ್ದಾರೆ. ನೀಲಕಂಠಸ್ತವ ಎಂಬ ಶ್ಲೋಕವೊಂದು **ಭಜಾಮಿ ಕರುಣಾಲಯಂ** ಎಂದೇ ಆರಂಭವಾಗುತ್ತದೆ. ಹೀಗೆ ಈಶ್ವರನು ಕರುಣೆಯ ಸದನವೇ ಆಗಿ ಕರುಣಾಮೂರ್ತಿಯೇ ಆಗಿದ್ದಾನೆ. ಅಷ್ಟೇ ಅಲ್ಲದೆ ಮೊದಲು ಅರ್ಧನಾರೀಶ್ವರನಾಗಿದ್ದ ಪರಮೇಶ್ವರನು, ಬ್ರಹ್ಮನ ಕೋರಿಕೆಯಂತೆ ತನ್ನ ವಾಮಭಾಗದ ಮೂಲಕ ಶಕ್ತಿಯನ್ನು ಅರ್ಥಾತ್ ಸ್ತ್ರೀಯನ್ನು ಬೇರ್ಪಡಿಸಿ ವಾಮದೇವನೆನಿಸಿದ್ದಾನೆ. ವಾಮ ಎಂಬುದಕ್ಕೆ ಎಡಭಾಗ ಮತ್ತು ಸ್ತ್ರೀ ಎಂಬ ಎರಡು ಅರ್ಥಗಳುಂಟು. ಶಕ್ತಿದೇವಿಯ ಪತಿಯೆಂಬ ಅರ್ಥದಲ್ಲೂ ಈಶ್ವರನು ವಾಮದೇವನೇ, ಇಂಥ ಮೂರ್ತಿಯಲ್ಲಿ ಭಾಗವತರ ಬೇಡಿಕೆಯಾದರೂ ತಮ್ಮ ರಕ್ಷಣೆ.

ಪ್ರಸ್ತುತ ಕೃತಿಯು ಅತಿ ಪ್ರಸಿದ್ಧವಾದ ಮೋಹನ ರಾಗದಲ್ಲಿ ರಚಿತವಾಗಿದೆ. 28ನೇ ಮೇಳದಲ್ಲಿ ಉಪಾಂಗಜನ್ಯವಾದ ಈ ರಾಗದ ಆರೋಹಾವರೋಹಗಳು **ಸ ರಿ ಗ ಪ ದ ಸ – ಸ ದ ಪ ಗ ರಿ ಸ.** ಹಿಂದೂಸ್ತಾನೀ ಸಂಗೀತ ಪದ್ಧತಿಯ ಭೂಪ್ ಅಥವಾ ಭೂಪಾಲಿಯು ಈ ರಾಗವನ್ನು ಹೋಲುತ್ತದೆ (ಭೂಪಾಲ ಅಲ್ಲ).

ಮೋಹನ ರಾಗವು ಅತಿ ಪ್ರಾಚೀನರಾಗ. ಗ್ರೀಕರ ಗಾನಪದ್ಧತಿಯ ಪ್ರಥಮ ರಾಗವಿದು ಎನ್ನುತ್ತಾರೆ. ಪ್ರಪಂಚದ ಬಹುತೇಕ ಎಲ್ಲ ದೇಶಗಳ ಸಂಗೀತದಲ್ಲೂ ಮೋಹನರಾಗ ಬಳಕೆಯಲ್ಲಿದೆ. ಅತ್ಯಂತ ವಿಸ್ತಾರವಾದ ರಾಗಾಲಾಪನೆಗೆ ಅವಕಾಶವುಳ್ಳ ಈ ರಾಗದಲ್ಲಿ ಗೀತೆ, ಸ್ವರಜತಿ, ವರ್ಣ, ಕೃತಿ, ಪದ, ಜಾವಳಿ ಎಲ್ಲವೂ ರಚಿತವಾಗಿವೆ. 10ನೇ ಶತಮಾನದಲ್ಲಿದ್ದ ಮಾಣಿಕ್ಯ ವಾಚಕರ ತಿರುವಾಚಕಂ ಸ್ತೋತ್ರಗಳನ್ನು ಬಹಳ ಹಿಂದಿನಿಂದಲೂ ಈ ರಾಗದಲ್ಲಿ ಹಾಡುತ್ತಾ ಬಂದಿರುವರೆಂಬ ಮಾಹಿತಿ ಲಭ್ಯವುಂಟು. ಮೂರ್ಛನಾಕಾರಕ ಜನ್ಯರಾಗವಿದು. ತ್ರಿಸ್ಥಾಯಿಯಲ್ಲೂ ವ್ಯಾಪ್ತಿಯುಳ್ಳ, ಬಹುರಸಪ್ರಧಾನ ರಾಗ. ಈ ರಾಗದಲ್ಲಿರುವ ಕೆಲವು ರಚನೆಗಳೆಂದರೆ, **ವರವೀಣಾ**–ಗೀತೆ, **ಸಾಮಿದಯ**–ಸ್ವರಜತಿ, **ನೆನರುಂಚಿ, ನಿನ್ನುಕೋರಿ**–ವರ್ಣಗಳು, **ನನ್ನುಪಾಲಿಂಪ, ಎವರುರಾ, ಮೋಹನರಾಮ, ಭವನುತ, ರಾಮಾನಿನ್ನೇ ನಮ್ಮಿನ, ರಾರಾ ರಾಜೀವಲೋಚನರಾಮ, ಸದಾಪಾಲಯ** ಕೃತಿಗಳು.

'ವಾಮದೇವಾಯ ನಮಃ' ಎಂಬುದು ಶಿವಾಷ್ಟೋತ್ತರದಲ್ಲಿ ಆರನೆಯ ನಾಮವಾಗಿದ್ದು, ಅಂಥ ಈಶ್ವರನಿಗೆ ನಮಸ್ಕಾರಗಳನ್ನು ಸಲ್ಲಿಸಲಾಗಿದೆ.

ವಿರೂಪಾಕ್ಷಾಯ ನಮಃ

## 7. ಶ್ರೀವಿರೂಪಾಕ್ಷ ಶಿಕ್ಷಿತ ದಕ್ಷ

**ರಾಗ – ಗೌರಿ** **ಖಂಡಛಾಪುತಾಳ**

**ಶ್ರೀವಿರೂಪಾಕ್ಷ ಶಿಕ್ಷಿತದಕ್ಷ।**
**ಭಾವಭಕ್ತಿಂ ದೇಹಿ ಭಕ್ತಜನ ಪಾರಿಜಾತ**
**ದೇವಾಧಿದೇವ ಮಹಾದೇವ ಹರ ಶ್ರೀಕಂಠ॥**
**ಕಾಮತನು ಹರನೇತ್ರ ಕಮನೀಯ ಶುಭಗಾತ್ರ**
**ಕಂಜಜ ಹರಿಮಿತ್ರ ಕರುಣಾಸಮುದ್ರ**
**ಹೇಮಗಿರಿನಿಲಯ ಈಶ್ವರ ಹಿರಣ್ಮಯ**
**ಸಾಮಗಾನಲೋಲ ಸದಯ ಹರಿಕೇಶ ॥**

ಗೌರೀಪ್ರಿಯನಾದ ಶ್ರೀವಿರೂಪಾಕ್ಷನಲ್ಲಿ ಕೃತಿಕರ್ತರ ಬೇಡಿಕೆ ಭಕ್ತಿಭಾವವನ್ನು ಪ್ರಸಾದಿಸು ಎಂಬುದು. ಏಕೆಂದರೆ ಎಲ್ಲರನ್ನೂ ಅನುಗ್ರಹಿಸುವವನು ಶಿವನೇ ಹೌದು. ಈಶ್ವರನಿಲ್ಲಿ ದುಷ್ಟರನ್ನು ಶಿಕ್ಷಿಸುವಲ್ಲಿ ದಕ್ಷನಾದವನು. ದೇವಾಧಿದೇವತೆಗಳಿಗೂ, ಭಕ್ತಜನರಿಗೂ ಕಲ್ಪವೃಕ್ಷದಂತಿರುವವನು. ಮನ್ಮಥನ ದೇಹವನ್ನು ಭಸ್ಮಮಾಡಿದ, ಸುಂದರರೂಪಿ. ಕಮಲದಿಂದ ಹುಟ್ಟಿದ ವಿಷ್ಣುವಿಗೆ ಮಿತ್ರನಾದವನು. ಮೇರುಪರ್ವತವನ್ನೇ ಸದನವಾಗಿ ಉಳ್ಳ ಶಿವನು ಸುವರ್ಣಮಯ ಕಾಂತಿ ಹೊಂದಿದ್ದಾನೆ. ಈತ ಸಾಮಗಾನಪ್ರಿಯನೂ ಆಗಿದ್ದಾನೆ. ಸಾಮಗಾನ ಹಾಡುವವರಿಗೆ ಈಶ್ವರನು ಸುಲಭವಾಗಿ ಒಲಿಯುತ್ತಾನೆಂಬುದಕ್ಕೆ ರಾವಣ ಒಂದು ನಿದರ್ಶನ. ವೇದಗಳಲ್ಲಿ ತಾನು ಸಾಮವೇದವೇ ಆಗಿದ್ದೇನೆಂಬುದು ಭಗವದ್‌ವಾಕ್ಯ. **'ವೇದಾನಾಂ ಸಾಮವೇದೋಸ್ಮಿ'** ಇದು ಗೀತೆಯಲ್ಲಿ ಉಕ್ತವಾಗಿದೆ. ಆದ್ದರಿಂದ ಸೂಕ್ತರೀತಿಯಲ್ಲಿ, ನಿಯತವಾಗಿ ಮಾಡಿದ ಸಾಮಗಾನ ಅಭ್ಯಾಸದಿಂದ ಒಬ್ಬನು ದೇವರಿಗೆ ಸನಿಹನಾಗಬಹುದು ಅಥವಾ ದೈವತ್ವವನ್ನೇ ಪಡೆಯಬಹುದು. ಇದನ್ನೇ ಯಾಜ್ಞವಲ್ಕ್ಯಸ್ಮೃತಿ ಹೇಳುತ್ತದೆ. ತ್ಯಾಗರಾಜರು ಭಗವಂತನನ್ನು ಸಾಮವೇದಸಾರನೆಂದೇ ಗುರುತಿಸುತ್ತಾರೆ(**ನಾದತನುಮನಿಶಂ**). ಈ ಮೇಲಿನ ಮಾತುಗಳಿಂದ ಪರಮೇಶ್ವರನು ಸಾಮವೇದಸಾರನೂ ಹೌದು, ಸಾಮಗಾನಲೋಲನೂ, ಸಾಮವೇದನೂ ಹೌದು ಎಂಬುದು ತಿಳಿಯಬರುತ್ತದೆ.

ಪುರಾಣ ಪ್ರಕಾರ, ಕ್ಷೀರಸಮುದ್ರಮಥನಕಾಲದಲ್ಲಿ ಪಾಲ್ಗಡಲಿನಿಂದ ಹುಟ್ಟಿದ ಪಂಚವೃಕ್ಷಗಳಲ್ಲಿ ಪಾರಿಜಾತವೂ ಒಂದು. ಈ ವೃಕ್ಷದ ವೈಶಿಷ್ಟ್ಯಗಳು ಹಲವು. ಕಶ್ಯಪ ಮಹರ್ಷಿಗಳು ಅದಿತಿ ದೇವಿಗೆ ನಿರ್ಮಿಸಿದ ವೃಕ್ಷವಿದೆನ್ನುತ್ತಾರೆ. ಈ ವೃಕ್ಷದಿಂದಾಗಿ ಅದಿತಿ, ಶಚಿ, ರೋಹಿಣಿ ಮೊದಲಾದವರು ಅಖಂಡ ಸೌಭಾಗ್ಯಹೊಂದಿದರಂತೆ. ಪಾರಿಜಾತಕ್ಕೆ ಮಂದಾರವೆಂದೂ ಇನ್ನೊಂದು ಹೆಸರಿದೆ. ಇಲ್ಲಿ ಶಿವನು ಭಕ್ತಜನರ ಪಾಲಿಗೆ ಪಾರಿಜಾತನಾಗಿದ್ದಾನೆ.

ಕೃತಿಯ ಆರಂಭದ ಪ್ರಥಮಾಕ್ಷರ “ಶ್ರೀ”ಯು ಲಕ್ಷ್ಮಿ, ಮಂಗಳಕರ ಹಾಗೂ ಗೌರವಸೂಚಕವಾದುದು. ಪ್ರಸಕ್ತ ಸಂದರ್ಭದಲ್ಲಿ ಶ್ರೀಮಾತೆಯೊಡಗೂಡಿದ ಈಶ್ವರನೆಂದೂ, ಅರ್ಧನಾರೀಶ್ವರನೆಂದೂ, ಮಂಗಳಕರನೆಂದೂ ಅರ್ಥೈಸಿಕೊಳ್ಳಬಹುದು. ಅಂತೆಯೇ ಭಗವಂತನನ್ನು ಗೌರವಪೂರ್ಣವಾಗಿ ಸಂಬೋಧಿಸುವ ಸಲುವಾಗಿ ಶ್ರೀ ಅಕ್ಷರ ಬಳಕೆಯಾಗಿದೆ ಎಂದೂ ಹೇಳಬಹುದು.

ಕೃತಿಯು ಗೌರಿ ರಾಗದಲ್ಲಿ ನಿಯೋಜಿತವಾಗಿದೆ. ಗೌರಿಯು 15ನೇ ಮಾಯಾಮಾಳವ ಗೌಳ ಮೇಳದಲ್ಲಿ ಉಪಾಂಗ ಜನ್ಯ. ಇದರ ಆರೋಹಾವರೋಹಗಳು **ಸ ರಿ ಮ ಪ ನಿ ಸ – ಸ ನಿ ದ ಪ ಮ ಗ ರಿ ಸ.** ಅಪರೂಪವಾದ ಈ ರಾಗದಲ್ಲಿ ತ್ಯಾಗರಾಜವಿರಚಿತ **ಜಯಜಯ ಶ್ರೀರಘು,** ಮುತ್ತುಸ್ವಾಮಿದೀಕ್ಷಿತರ **ಗೌರೀ ಗಿರಿರಾಜಕುಮಾರಿ** ಹಾಗೂ ಪಲ್ಲವಿ ದೊರೆಸ್ವಾಮಿ ಅಯ್ಯರ್‌ರ **ಧೂರ್ಜಟಿ ನಟಿಂಚೆನೆ** ರಚನೆಗಳಿವೆ.

ಶಿವಾಷ್ಟೋತ್ತರಶತದಲ್ಲಿ ಏಳನೆಯ ನಾಮ ಶ್ರೀವಿರೂಪಾಕ್ಷ. ಅಂತೆಯೇ ಈ ಕೃತಿಗುಚ್ಛದ ಏಳನೆಯ ಕೃತಿ ಶ್ರೀವಿರೂಪಾಕ್ಷ ಎಂದೇ ಆರಂಭವಾಗಿದೆ. ಕೃತಿಗೆ ಅಳವಟ್ಟ ಚಿಟ್ಟೆಸ್ವರದಲ್ಲಿ **ದ ಪ ಪ ಮ, ರಿ ಮಾ ಮ** ಎಂಬ ಜಂಟಿ ಸ್ವರ ಪ್ರಯೋಗ **ಮ ಗ ರಿ, ಪ ಮ ಗ ರಿ, ಸ ರಿ ಪ ಮ ರೀ** ಎಂಬ ಸ್ರೋತೋವಹಯತಿ ಮಾದರಿ ಸ್ವರಜೋಡಣೆಗಳು ಕಾಣಬರುತ್ತವೆ.

ಕಪರ್ದಿನೇ ನಮಃ

## 8. ಕೃಪಾಸಾಗರಂ ಶಿವಂ ಕಪರ್ದಿನಂ

**ರಾಗ – ಮಾಧವ ಮನೋಹರಿ** **ರೂಪಕತಾಳ**

**ಕೃಪಾಸಾಗರಂ ಶಿವಂ ಕಪರ್ದಿನಂ ಭಜಾಮ್ಯಹಂ॥**
**ಅಪವರ್ಗ ಸುಖದಾಯಕಂ ಅಖಿಲಾಂಡನಾಯಕಂ॥**
**ಪತಿತಜನ ಪಾಪಹರಣಂ ಭಕ್ತಜನ ಪಾರಿಜಾತಂ**
**ಅತಿಶಯ ಪಾವನ ಸುಚರಿತಂ ಅಮೃತ ಘಟೇಶ್ವರಂ**
**ಶತಮಖ ಮುಖಾದಿನುತಂ ಸದಯ ಹರಿಕೇಶಂ॥**

ಕಪರ್ದಿಯಾಗಿರುವ ಕೃಪಾಸಾಗರ ಶಿವನನ್ನು ನಾನು ಭಜಿಸುತ್ತೇನೆ. ಅಖಿಲಾಂಡನಾಯಕನೂ, ಪಾಪಿ ಜನರ ಪಾಪಗಳನ್ನು ಹೋಗಲಾಡಿಸುವವನೂ, ಭಕ್ತಜನರ ಕಾಮಧೇನುವೂ, ಅತಿಶಯವಾಗಿ ಪವಿತ್ರಚರಿತೆ ಹೊಂದಿದವನೂ, ಇಂದ್ರನಿಂದಲೂ ಸ್ತುತಿಸಲ್ಪಟ್ಟವನೂ, ದಯಾಪೂರ್ಣನೂ ಆದ ಕಪರ್ದಿಯನ್ನು ನಾನು ಭಜಿಸುತ್ತೇನೆಂದು ಈ ಕೃತಿಯಲ್ಲಿ ಮುತ್ತಯ್ಯಭಾಗವತರು ತಿಳಿಸಿದ್ದಾರೆ. ಕಪರ್ದಿ ಎಂಬುದನ್ನು **ಕಂ ಜಲಂ ಪಿಬತಿ ಇತಿ ಕಪಃ** ಎನ್ನಲಾಗಿದೆ. ಶಿವನು ತನ್ನ ತಲೆಯ ಮೇಲೆ ಬಿದ್ದ ಗಂಗೆಯ ನೀರನ್ನು ಜಟೆಯು ಕುಡಿದುದರಿಂದ ಜಟೆಗೆ **ಕಪ** ಎಂಬ ಹೆಸರು. ನಂತರ ಭಗೀರಥನ ಪ್ರಾರ್ಥನೆಗೆ ಓಗೊಟ್ಟು ಗಂಗೆ ಹೊರಹೋಗಲು ಶಕ್ತಿ ಕೊಟ್ಟದ್ದರಿಂದ ಈಶ್ವರನ ಈ ಜಟೆ **ಖುದ್ಧ** ಎನಿಸಿತು. ಹೀಗೆ ಯಾವುದು ಕಪವೂ, ಖುದ್ಧವೂ ಆಗಿದೆಯೋ ಅದೇ ಕಪರ್ದ. ಅದು ಉಳ್ಳವನೇ **ಕಪರ್ದಿ** ಎಂಬ ವಿವರಣೆ ಕಾಣಬರುತ್ತದೆ.

ಕೃಪಾಸಾಗರಂ ಎಂದಾರಂಭವಾಗುವ ಈ ಕೃತಿಯು ಮಾಧವ ಮನೋಹರಿ ರಾಗದಲ್ಲಿದೆ. ಮಾಧವ ಮನೋಹರಿ ರಾಗ ಎರಡು ವಿಧವಾಗಿ ಪ್ರಯೋಗವುಂಟು.

1) **ಸ ಗ ರಿ ಗ ಮ ಪ ನಿ ದ ನಿ ಸ** – **ಸ ನಿ ದ ಮ ಗ ರಿ ಸ**

ಇದು 57ನೇ ಮೇಳ ಸಿಂಹೇಂದ್ರ ಮಧ್ಯಮದಲ್ಲಿ ಜನ್ಯ.

2) **ಸ ರಿ ಗ ಮ ಪ ನಿ ದ ನಿ ಸ** – **ಸ ನಿ ದ ಮ ಗ ರಿ ಸ**

ಈ ಪ್ರಕಾರ 22ನೇ ಮೇಳ ಖರಹರಪ್ರಿಯದಲ್ಲಿ ಜನ್ಯ.

Music Academy ನಿರ್ಧಾರದಂತೆ ಈ ರಾಗದ ಆರೋಹಾವರೋಹಗಳು,

**ಸ ರಿ ಗ ಮ ಪ ಮ ನಿ ದ ನಿ ಸ — ಸ ನಿ ದ ಮ ಗ ರಿ ಸ**

**2 2 1 1 2 2 2 2 2 1 2 2**

ಇದು 22ನೇ ಮೇಳದಲ್ಲೇ ಜನ್ಯವಾಗುತ್ತದೆ. ಶುದ್ಧದೈವತದ ಪ್ರಯೋಗ ಅಲ್ಪವಾಗಿದ್ದು ನಿರ್ದಿಷ್ಟ ಸಂಚಾರದಲ್ಲಷ್ಟೇ ಬಳಕೆಯಾಗುತ್ತದೆ.

ತಂಜಾವೂರು ಅಚ್ಯುತನಾಯಕನ ಆಸ್ಥಾನ ವಿದ್ವಾಂಸರೆನ್ನಲಾದ ಅಕಳಂಕ ಗೋವಿಂದಾಚಾರ್ಯವಿರಚಿತ **ಸಂಗ್ರಹಚೂಡಾಮಣಿ**ಯಲ್ಲಿ ಮುನ್ನೂರಕ್ಕೂ ಹೆಚ್ಚಿನ ಲಕ್ಷಣಗೀತೆಗಳಿವೆ. ಲಕ್ಷಣಗೀತೆ ಎಂದೊಡನೆ ಅದು ರಾಗದ ಲಕ್ಷಣವನ್ನು ಸಾಹಿತ್ಯದ ಮೂಲಕ ತಿಳಿಸುತ್ತದೆ ಎಂಬ ಅಂಶ ಸರ್ವವಿದಿತ. ಸಂಗ್ರಹಚೂಡಾಮಣಿಯಲ್ಲಿನಂತೆ ಮಾಧವ ಮನೋಹರಿ ರಾಗದ ಲಕ್ಷಣ ಹೀಗಿದೆ.

**ಚತುಶೃತಿರಿಷಭ ಸಾಧಾರಣಗಾಂಧಾರ ಪ್ರತಿಮಧ್ಯಮ ಕಾಕಲಿಸ್ವರ**
**ಇತರ ಶುದ್ಧ ಆರೋಹ ಸಂಪೂರ್ಣವಕ್ರ, ಅವರೋಹ**
**ಪವರ್ಜಿತ ಸ ಗ್ರಹನ್ಯಾಸಾಂಶ ... ... ... ... ಸಿಂಹೇಂದ್ರಮಧ್ಯಮ**
**ಮೇಲ ಜನಿತ ಮಾಧವಮನೋಹರಿರಾಗ** ಎನಿಸಿದೆ.

ಗೋವಿಂದಾಚಾರ್ಯರು ತ್ಯಾಗರಾಜರಿಗೆ ಹಿರಿಯ ಸಮಕಾಲೀನರಾಗಿದ್ದವರು. ಆನಂದರಾಮ ಉಡುಪರು ಮುತ್ತುಸ್ವಾಮಿದೀಕ್ಷಿತರ ರಚನೆಗಳನ್ನು ಸಂಗ್ರಹಿಸಿ ಎರಡು ಭಾಗಗಳಲ್ಲಿ ಸಿದ್ಧಪಡಿಸಿದ್ದಾರೆ. ಇದರ ಎರಡನೇ ಭಾಗದಲ್ಲಿ (ಪು. 681) ಮಾಧವ ಮನೋಹರಿಯ ಆರೋಹಾವರೋಹಗಳು ಹೀಗಿವೆ, **ಸ ರಿ ಗ ಮ ಪ ನಿ ದ ನಿ ಸ – ಸ ನಿ ದ ಮ ಗ ರಿ ಸ.** 22ನೇ ಮೇಳ ಜನ್ಯ ಈ ರಾಗದ ಪ್ರಸಿದ್ಧ ರಚನೆಯೆಂದರೆ ದೀಕ್ಷಿತರ **ಮಹಾಲಕ್ಷ್ಮಿ ಕರುಣಾರಸಲಹರಿ.** ನಮ್ಮ ರಾಗಕ್ಷೇತ್ರದಲ್ಲಿ ಮನೋಹರಿ ಎಂದು ಅಂತ್ಯವಾಗುವ ಅದೆಷ್ಟೋ ರಾಗಗಳು ಉಂಟು. ಉದಾಹರಣೆಗೆ ದೇವಮನೋಹರಿ, ಸರಸ್ವತೀಮನೋಹರಿ, ಗೌರೀಮನೋಹರಿ, ಕಮಲಾಮನೋಹರಿ, ಮನೋಹರಿ ಮುಂತಾದವು.

ಮುತ್ತಯ್ಯಭಾಗವತರು ರಚಿಸಿರುವ ಶಿವಾಷ್ಟೋತ್ತರಶತ ಕೃತಿಗುಚ್ಛದಲ್ಲಿನ ಕೃತಿಗಳ ಆರಂಭ ಬಹುತೇಕ ಅಷ್ಟೋತ್ತರದಲ್ಲಿ ಕಾಣಬರುವ ನಾಮಗಳಿಂದಲೇ ಆರಂಭವಾಗುತ್ತದೆ. ಅಪರೂಪವಾಗಿ ಕೆಲವು ರಚನೆಗಳಲ್ಲಿ ಈ ನಾಮವು ಆನಂತರ ಅಳವಟ್ಟಿರುವುದುಂಟು. ಇದಕ್ಕೆ ಉದಾಹರಣೆ ನೀಡಬಹುದಾದ ಕೃತಿಯಿದು. ಕೃತಿಯು ಕಪರ್ದಿನೇ ನಮಃ ಎಂದಾರಂಭವಾಗದೆ ಕಪರ್ದಿಯ ಹೆಸರು ಆನಂತರ ಅಳವಟ್ಟಿದೆ.

ನೀಲಲೋಹಿತಾಯ ನಮಃ

## 9. ನೀಲಲೋಹಿತಾಯ ಕಾಲ ಕಾಲ

ರಾಗ – ಮಾಳವಿ ಆದಿತಾಳ

ನೀಲಲೋಹಿತಾಯ ಕಾಲ ಕಾಲ।
ಫಾಲಲೋಚನ ಹರ ಬಾಲೇಂದು ಭೂಷಣ
ಭಕ್ತಪ್ರಿಯ ಮಾಂಪಾಲಯ ಶಂಭೋ॥
ಕುಮಾರ ಜನಕ ಕುರಂಗ ಧೃತಕರ।
ಉಮಾಮನೋಹರ ಉಪನಿಷತ್ಸಾರ।
ಶಮಾದಿ ಗುಣಗಣ ಶಾಂತ ಉದಾರ।
ಸರ್ವ ಪಾಪಹರ ಶ್ರೀಹರಿಕೇಶ॥

ಪ್ರಾರ್ಥನಾ ರೂಪದ ಕೃತಿಯಿದು. ಈಶ್ವರನಿಗೆ ನೀಲಲೋಹಿತನೆಂದೂ ಹೆಸರುಂಟು. ಕಾಲಚಕ್ರ, ಕಾಲಗತಿ, ಕಾಲಮೃತ್ಯವನ್ನು ಯಾರಿಂದಲೂ ತಪ್ಪಿಸಲು ಸಾಧ್ಯವಿಲ್ಲ. ಪ್ರಿಯ–ಅಪ್ರಿಯ, ಚಿಂತೆ–ಅಚಿಂತೆ, ಸುಖ–ದುಃಖ, ಸಂಯೋಗ–ವಿಯೋಗಗಳೆಲ್ಲವೂ ಕಾಲಧರ್ಮಕ್ಕೆ ತಕ್ಕಂತೆ ಬದಲಾಗುತ್ತಲೇ ಹೋಗುತ್ತದೆ. ಜೀವರು ಇದನ್ನರಿತು ಅದೆಲ್ಲವನ್ನೂ ಶಿವಾರ್ಪಣೆ ಮಾಡಿದರೆ ಶಿವನ ಒಲವಿಗೆ ಪಾತ್ರರಾಗಬಹುದು ಎನ್ನುತ್ತಾರೆ. ಇದರಿಂದ ಸಕಲವೂ ಶಿವವೇ ಆಗುತ್ತದೆ. ಈ ನಿಟ್ಟಿನಿಂದ ಪರಮೇಶ್ವರನು ಕಾಲನಿಗೂ ಕಾಲನೆನಿಸುತ್ತಾನೆ. ಹಣೆಯಲ್ಲಿ ಕಣ್ಣುಳ್ಳ ಮುಕ್ಕಣ್ಣನು ಬಾಲಚಂದ್ರನಿಂದ ಅಲಂಕೃತನಾಗಿ ಭಕ್ತಪ್ರಿಯನಾದ ಶಂಭು ಎನಿಸಿದ್ದಾನೆ. ಸುಬ್ರಹ್ಮಣ್ಯಸ್ವಾಮಿಯ ತಂದೆಯೂ, ಕುರಂಗಧೃತಕರನೂ, ಉಮಾಮನೋಹರನೂ, ಉಪನಿಷತ್ಸಾರನೂ, ಶಮವೇ ಮೊದಲಾದ ಗುಣಗಣನೂ, ಶಾಂತನೂ, ಉದಾರಿಯೂ, ಎಲ್ಲ ಪಾಪಗಳನ್ನೂ ಹೋಗಲಾಡಿಸುವವನೂ ಆದ ಈಶ್ವರನೇ ನನ್ನನ್ನು ರಕ್ಷಿಸು ಎಂದು ಅವರು ಶಿವನಲ್ಲಿ ಮನವಿ ಮಾಡುತ್ತಿದ್ದಾರೆ.

ಪರಮೇಶ್ವರನು ಮನೋನಿಗ್ರಹ, ಶಾಂತತೆ, ಔದಾರ್ಯ, ಕ್ಷಮಾಗುಣಗಳಿಗೆ ಒಂದು ಆದರ್ಶ. ಶಿವನು ಭಕ್ತರಿಗೆ ಶೀಘ್ರವಾಗಿ ಸುಖನೀಡುವವನಾದ್ದರಿಂದ ಶಂಭು ಎನಿಸಿದ್ದಾನೆ. ಭಾಗವತರು ಇದನ್ನು ತಿಳಿದೇ ಈಶ್ವರನಲ್ಲಿ ಮಾಂಪಾಲಯ ಶಂಭೋ ಎಂದು ತಮ್ಮ ಕೋರಿಕೆಯನ್ನು ತಿಳಿಸುತ್ತಿದ್ದಾರೆ. ಇನ್ನು ಚಿಕ್ಕದಾದ ಚಿಟ್ಟೆಸ್ವರದ ಮೊದಲ ಆವರ್ತದಲ್ಲೇ ಮಾಳವಿರಾಗದ ವಿಶಿಷ್ಟಸ್ವರೂಪ ಕಾಣಬರುವಂತಿದೆ **ರೀ ಗ ಮ ಪ ನಿ ಮ ದ ನಿ ಸ, ದ ನಿ ಪ ಮ ಗ ಮ ರಿ ಗ ಮ ರಿ ಸ ನಿ, ದ ನಿ ಸ ರಿ ಗ ಮ ಪ ನಿ ಮಾ.**

ಮಾಳವಿಯು 28ನೇ ಮೇಳದಲ್ಲಿ ಜನ್ಯವಾದ ಉಪಾಂಗರಾಗ. ರಾಗದ ಆರೋಹಾವರೋಹಗಳು

ಸ ರಿ ಗ ಮ ಪ ನಿ ಮ ದ ನಿ ಸ – ಸ ನಿ ದ ನಿ ಪ ಮ ಗ ಮ ರಿ ಸ
ಸ ರಿ ಗ ಮ ಪ ಮ ದ ನಿ ಸ – ಸ ನಿ ದ ನಿ ಪ ಮ ಗ ಮ ರಿ ಸ

ಈ ರಾಗದಲ್ಲಿ ಗೋವಿಂದಾಚಾರ್ಯವಿರಚಿತ ಲಕ್ಷಣಗೀತೆ, ತ್ಯಾಗರಾಜವಿರಚಿತ **ನೆನರುಂಚಿನಾನು ಅನ್ನಿಟಿಕಿ,** ಪಟ್ನಂ ಸುಬ್ರಹ್ಮಣ್ಯ ಅಯ್ಯರ್‌ವಿರಚಿತ **ಇದಿನ್ಯಾಯಮಾ** ಹಾಗೂ ಜಯಚಾಮರಾಜೇಂದ್ರ ಒಡೆಯರ್‌ರವರ **ಶಂಕರಿ ಸದಾನಂದ ಲಹರಿ** ಪ್ರಮುಖವಾದ ಕೆಲವು ರಚನೆಗಳು. ಪ್ರಸ್ತುತ ಕೃತಿಯ ಆರಂಭದಲ್ಲೇ ಶಿವಾಷ್ಟೋತ್ತರಶತದ 9ನೇ ನಾಮದ ಅಳವಡಿಕೆಯಿದೆ.

ಶಂಕರಾಯ ನಮಃ

## 10. ಶಂಕರಗಂಗಾಧರ

ರಾಗ – ಶುದ್ಧಸಾವೇರಿ ಆದಿತಾಳ

**ಶಂಕರ ಗಂಗಾಧರ ಶ್ರೀಕಂಠ**
**ಸರ್ವಲೋಕ ಶರಣ್ಯಾ ಮಾಮವ।**
**ಪಂಕಜಭವಾದಿ ಭಕ್ತಪೂಜಿತ ಸಂಕಟಹರಣ ಸಕಲೇಶ್ವರ॥**
**ಶೂಲಕಪಾಲ ಪರಶುಮೃಗಧರ ಸುಂದರಾಕಾರ ಸುರಗಣವಂದ್ಯ।**
**ಕಾಮಥನ ಫಣಿಕಂಕಣಪಾಣೆ ಕಾಮಿತಫಲದ ಶ್ರೀಹರಿಕೇಶ॥**

ಪ್ರಾರ್ಥನಾರೂಪದ ಕೃತಿಯಿದು. ಮಂಗಳಕರನಾದ ಗಂಗಾಧರ, ಶ್ರೀಕಂಠನಲ್ಲಿ ಭಾಗವತರು ಮಾಂ ಅವ ಎಂದು ಪ್ರಾರ್ಥಿಸುತ್ತಿದ್ದಾರೆ. ಏಕೆಂದರೆ ಶಂಕರನು ಸರ್ವಲೋಕಗಳನ್ನೂ ರಕ್ಷಿಸುವ ಸಮರ್ಥ. ಬ್ರಹ್ಮಪೂಜಿತನಾದ ಶಿವನು ಸಕಲೇಶ್ವರನೂ, ಸಂಕಟಹರನೂ ಆಗಿದ್ದಾನೆ. ದೇವಗಣದಿಂದ ವಂದಿತನಾಗಿದ್ದಾನೆ. ಶೂಲ, ಕಪಾಲ, ಖಡ್ಗಗಳನ್ನು ಹಿಡಿದು, ಸರ್ಪವನ್ನೇ ಕಂಕಣವಾಗಿ ಕಟ್ಟಿಕೊಂಡ ಸುಂದರಾಕಾರ. ಪಾರ್ವತಿಯ ವಿವಾಹ ಪ್ರಸಂಗದಲ್ಲಿ ಶಂಕರನು ಪ್ರಸನ್ನನಾಗಿದ್ದು ತನ್ನ ಸೌಂದರ್ಯ ಮಾಧುರ್ಯ ಸುಧಾಪೂರ್ಣವಾದ ದಿವ್ಯಮೂರ್ತಿಯಾಗಿದ್ದನಂತೆ. ಈತ ಭಕ್ತರ ಅಭೀಷ್ಟಗಳನ್ನೂ ನೀಡುವಾತನಾಗಿದ್ದಾನೆ.

ಈ ಕೃತಿಯಲ್ಲಿ ಪರಮೇಶ್ವರನ ಸೌಲಭ್ಯದೊಂದಿಗೆ ಕಲಾತ್ಮಕ ವರ್ಣನೆಯನ್ನೂ ಕಾಣಬಹುದು. ಸೌಲಭ್ಯವೆಂಬುದು ಈಶ್ವರನ ದಯೆಗೆ ಇನ್ನೊಂದು ಹೆಸರು. ಇಲ್ಲಿ ಚಿತ್ರಣಗೊಂಡ ಈಶ್ವರನು ಸಂಕಟಹರಣ, ಕಾಮಿತಫಲಗಳನ್ನು ನೀಡುವಾತ. ಅಂತೆಯೇ ಏನೆಲ್ಲ ವಸ್ತುಗಳನ್ನು ಧರಿಸಿ ಆತ ಅಲಂಕೃತನಾಗಿ ಸುಂದರಕಾರನಾಗಿದ್ದಾನೆ ಎಂಬುದು ವಿಷಯ. ಜಗತ್ತಿನಲ್ಲಿ ವಸ್ತು ಅಥವಾ ವಿಷಯವೊಂದನ್ನು ನಾವು ಪ್ರೀತಿಸುವುದು ಅದರಲ್ಲಿ ಅಡಗಿರುವ ಸೌಂದರ್ಯದಿಂದ. ಆ ವಸ್ತುವು ಆನಂದದ ನೆಲೆಯಾಗಿರದೇ ನಾವು ಅದನ್ನು ಪ್ರೀತಿಸಲಾಗದು. ಸೌಂದರ್ಯವೆಂಬುದಾದರೂ ಜಡವಲ್ಲ. ಚೇತನದ ಲಕ್ಷಣ. ಶರಣಾಗತಿ ಗದ್ಯದ ಸಾಲಿನಲ್ಲಿ ಸುದರ್ಶನಸೂರಿಗಳು ಸೌಂದರ್ಯ ಎಂಬುದು ಅವಯವಶೋಭಾ ಎನ್ನುತ್ತಾರೆ. ಎಂದರೆ ಈಶ್ವರನ ಭಾಗಶಃ ಸೌಂದರ್ಯ ಅವಯವಿಶೋಭಾ ಎಂಬುದಾದರೂ ಪೂರ್ಣಸೌಂದರ್ಯ ಎನಿಸುತ್ತದೆ.

ಸುಂದರ ಚಿಟ್ಟೆಸ್ವರವುಳ್ಳ ಈ ಕೃತಿಗೆ ಅಳವಟ್ಟರಾಗ ಶುದ್ಧಸಾವೇರಿ. ಗಾಂಧಾರ, ನಿಷಾದ ವರ್ಜ್ಯವಾದ ಪ್ರಸಿದ್ಧ ಔಡವರಾಗವಿದು. ಆರೋಹಾವರೋಹಗಳು **ಸ ರಿ ಮ ಪ ದ ಸ – ಸ ದ ಪ ಮ ರಿ ಸ.** ಚಿಟ್ಟೆಸ್ವರದಲ್ಲಿ **ದಾಪದಪಮ – ಪಾಮಪಮರಿ, ದಪಾಮ – ಪಮಾರಿ – ಮರೀಸ – ದಸರಿಮ – ಪದಸರಿ – ಸಸ – ದಾದ – ದರಿದಸ – ಸರಿಮರಿಸದಸದಪಮ** ದಂಥ ಸ್ವರಜೋಡಣೆ ಸುಂದರವಾಗಿವೆ.

28 ಅಥವಾ 29ನೇ ಮೇಳದಲ್ಲಿ ಜನ್ಯವಾದ ಈ ರಾಗವು ದೀಕ್ಷಿತರ ಸಂಪ್ರದಾಯದಂತೆ ದೇವಕ್ರಿಯ ಎನಿಸಿದೆ. ಇದು ಮೊದಲನೇ ಮೇಳ ಕನಕಾಂಗಿಯಲ್ಲಿ ಜನ್ಯವಾಗಿದೆ. ದೇವಕ್ರಿಯ ಎಂಬ ಹೆಸರಿನ ರಾಗವನ್ನು ತ್ಯಾಗರಾಜರೂ ಬಳಸಿ ಕೃತಿರಚಿಸಿದ್ದಾರೆ. ಆದರೆ ಇವೆರಡೂ ಬೇರೆ ಬೇರೆ ಸ್ವರೂಪವನ್ನೇ ಉಳ್ಳದ್ದಾಗಿದೆ. ಹಿಂದೂಸ್ಥಾನೀ ಸಂಗೀತಪದ್ಧತಿಯ ದುರ್ಗಾ ಈ ರಾಗವನ್ನು ಹೋಲುತ್ತದೆ. ಶುದ್ಧಸಾವೇರಿಯಲ್ಲಿ ಗೀತೆ, ವರ್ಣ ಹಾಗೂ ಅನೇಕ ಕೃತಿಗಳನ್ನು ಕಾಣುತ್ತೇವೆ. ಪ್ರಸಿದ್ಧವಾದ ಕೆಲವು ರಚನೆಗಳೆಂದರೆ ತ್ಯಾಗರಾಜರ **ದರಿನಿ ತೆಲುಸುಕೊಂಟಿ, ಕಾಲಹರಣಮೇಲರಾ ಹರೇ,** ಸ್ವಾತಿ ತಿರುನಾಳರ **ಜನನಿಪಾಹಿ,** ರಾಂನಾಡ್ ಶ್ರೀನಿವಾಸ ಅಯ್ಯಂಗಾರ್‍ಯರ **ಸಾಮಜವರದಾ**. ಈ ರಾಗದಲ್ಲಿ **ಆನಲೇಕರ** ಎಂದಾರಂಭವಾಗುವ ಗೀತೆಯೊಂದೂ ಪ್ರಯೋಗದಲ್ಲಿದೆ.

ಪ್ರಸ್ತುತ ಕೃತಿಯ ಆರಂಭದಲ್ಲೇ ಶಿವಾಷ್ಟೋತ್ತರಶತದ 10ನೇ ನಾಮ ಅಳವಟ್ಟಿದೆ.

**ಶೂಲಪಾಣಯೇ ನಮಃ**

## 11. ಫಾಲಲೋಚನ ಶೂಲಪಾಣೇ

**ರಾಗ – ಧನ್ಯಾಸಿ** **ಆದಿತಾಳ**

**ಫಾಲಲೋಚನ ಶೂಲಪಾಣೇ ಭಕ್ತಪ್ರಿಯ ಮಾಂ ಪಾಹಿಪಾಹಿ।**
**ಕಾಲಕಾಲ ಕಪಾಲಧರ ಶಿವಕಾಮಿ ಮನೋಹರ। ಕರುಣಾಸಾಗರ॥**
**ಪಾವನ ಭಸ್ಮೋದ್ಧೂಳಿತ ದೇಹ ಪರಮಸುಖಪ್ರದ ಪಾಪವಿದೂರ**
**ಶಿವನಚರವೇಶ ದಿವಿಜಗಣಪೋಷ ಭವಭಯಹರ ಈಶ ಭವಶ್ರೀಹರಿಕೇಶ॥**

ನನ್ನನ್ನು ರಕ್ಷಿಸು, ರಕ್ಷಿಸು ಎನ್ನುತ್ತಾ ಭಾಗವತರು ಫಾಲಲೋಚನನಾದ ಶೂಲಪಾಣಿಯನ್ನು ಕೋರುತ್ತಿದ್ದಾರೆ. ಏಕೆಂದರೆ ಈಶ್ವರನು ಪಾಪಗಳನ್ನು ಹೋಗಲಾಡಿಸಿ ಪರಮಸುಖವನ್ನು ನೀಡುವ ಕರುಣಾಸಾಗರನೆಂಬುದು ಅವರಿಗೆ ತಿಳಿದಿದೆ. ಅಲ್ಲದೆ ಪರಮೇಶ್ವರನು ಸಮಯಕ್ಕೇ(ಕಾಲ) ಅಂತಕನ ರೂಪದಲ್ಲಿರುವವನು. ಕಪಾಲಧರನೂ, ಪಾರ್ವತೀಪ್ರಿಯನೂ, ಪವಿತ್ರವಾದ ಭಸ್ಮದಿಂದ ಅಲಂಕರಿಸಲ್ಪಟ್ಟ ದೇಹವುಳ್ಳವನೂ, ಸುರಗಣವನ್ನು ಪೋಷಿಸುವವನೂ, ಜನನ ಮರಣಗಳ ಭಯವನ್ನು ನಾಶಮಾಡುವವನೂ, ವಿಶಿಷ್ಟ ಅಸ್ತಿತ್ವವನ್ನು ಹೊಂದಿದ ಫಾಲಲೋಚನೂ ಆದ ಕಾರಣ ಕೃತಿಕರ್ತರು ತಮ್ಮನ್ನು ರಕ್ಷಿಸೆಂದು ಪ್ರಾರ್ಥಿಸುತ್ತಾರೆ. ಇಲ್ಲಿ ಪ್ರಯೋಗವಾಗಿರುವ ಭವ ಪದವು ಶ್ಲೇಷಾರ್ಥ ಹೊಂದಿದೆ. ಅವೆಂದರೆ (1) ಪುನರ್ಜನ್ಮ, (2) ಅಸ್ತಿತ್ವ. ಅಂತೆಯೇ ಕಾಲ ಪದವೂ (1) ಸಮಯ, (2) ಯಮ ಎಂಬ ಅರ್ಥಗಳಲ್ಲಿ ಅಳವಟ್ಟಿವೆ. ಈಶ್ವರನು ಪುನರ್ಜನ್ಮದ ಭಯವನ್ನು ಹೋಗಲಾಡಿಸುವವನೂ, ನಿರಂತರ ಅಸ್ತಿತ್ವದಲ್ಲಿರುವವನೂ ಹೌದು. ಅಂತೆಯೇ ಪರಮೇಶ್ವರನು ಯಮದೇವನಿಗೂ ಯಮಸದೃಶನಾದವನು.

ಚಿಕ್ಕದಾದ ಚೊಕ್ಕವಾದ ಚಿಟ್ಟೆಸ್ವರ ಹೊಂದಿರುವ ಫಾಲಲೋಚನ ಕೃತಿಯು ಧನ್ಯಾಸಿ ರಾಗದಲ್ಲಿ ಅಳವಟ್ಟಿದೆ. ಧನ್ಯಾಸಿಯು 8ನೇ ಮೇಳದಲ್ಲಿ ಜನ್ಯವಾದ ಔಡವಸಂಪೂರ್ಣ ಉಪಾಂಗರಾಗ. ಅರೋಹಾವರೋಹಗಳು **ಸ ಗ ಮ ಪ ನಿ ಸ – ಸ ನಿ ದ ಪ ಮ ಗ ರಿ ಸ.** ಲಕ್ಷಣಗೀತೆ, ಪದವರ್ಣ ಹಾಗೂ ಹಲವು ಕೃತಿಗಳನ್ನುಳ್ಳ ರಾಗ ಇದಾಗಿದೆ. **ನಿ ಸ ದಾ ಪಾ, ದ ಪ ಗಾ ರಿ ಸ, ಸ ಗ ಗ ಮ ಮ ಪ ಪ ನಿ, ಪ ನಿ ಸಾ ನಿ ಗಾ ರಿ ಸ** ಮುಂತಾದುವು ರಾಗರಂಜಕ ಪ್ರಯೋಗಗಳು. ವೀಣಾಕುಪ್ಪಯ್ಯರವರ **ನೆನರುಂಚಿ,** ಮೈಸೂರು ಸದಾಶಿವರಾಯರ **ಏಮಗುವ** ವರ್ಣಗಳು, ತ್ಯಾಗರಾಜರ **ಸಂಗೀತ ಜ್ಞಾನಮು, ನೀಚಿತ್ತಮುನಿರ್ಮಲಮು, ಧ್ಯಾನಮೇ ವರಮೈನ,** ಶ್ಯಾಮಾಶಾಸ್ತ್ರಿಗಳ **ಮೀನಲೋಚನಬ್ರೋವ,** ಮುತ್ತುಸ್ವಾಮಿದೀಕ್ಷಿತರ **ಮಂಗಳದೇವತಯಾ** ರಚನೆಗಳು ಈ ರಾಗದ ಕೆಲವು ಪ್ರಸಿದ್ಧ ರಚನೆಗಳಾಗಿವೆ.

ಖಟ್ವಾಂಗಿನೇ ನಮಃ

## 12. ಕಾಲಾತೀತಾಯ ಖಟ್ವಾಂಗಿನೇ

**ರಾಗ – ಶುದ್ಧಧನ್ಯಾಸಿ** **ಆದಿತಾಳ**

**ಕಾಲಾತೀತಾಯ ಖಟ್ವಾಂಗಿನೇ ನಮಸ್ತೇ।**
**ಮೂಲಾಧಾರಾಯಮುನಿಗಣಸೇವಿತಾಯ**
**ಮುಕುಂದ ಪೂಜಿತಾಯ ತ್ರಿಮೂರ್ತಿ ಸ್ವರೂಪಾಯ॥**
**ಸೋಮಶೇಖರಾಯ ಸುಂದರಗಾತ್ರಾಯ**
**ಸೋಮಾಸ್ಕಂದಾಯ ಸುಸ್ವರ ರೂಪಾಯ**
**ವಾಮದೇವಾಯ ವಂದಿತ ಚರಣಾಯ**
**ಕಾಮ ಮಥನಾಯ ಶ್ರೀಕರ ಹರಿಕೇಶಾಯ॥**

ಖಟ್ವಾಂಗಿಗೆ ನಮಸ್ಕಾರ. ಯಾವುದೇ ನಿರ್ದಿಷ್ಟ ಅವಧಿಗೆ ಸೀಮಿತನಾಗದ ಅರ್ಥಾತ್ ಕಾಲಾತೀತನಾದ, ಮೂಲಾಧಾರನೂ ಅರ್ಥಾತ್ ಜಗತ್ತಿನ ಇರುವಿಕೆಗೇ ಕಾರಣಕರ್ತನೂ, ಮುನಿವೃಂದದಿಂದ ಪೂಜಿಸಲ್ಪಟ್ಟವನೂ, ಮುಕುಂದ ಪೂಜಿತನೂ, ವಾಮದೇವನೂ, ಶ್ರೀಕರನೂ ಆದ ಈಶ್ವರನಿಗೆ ನಮಸ್ಕಾರಗಳು. ಚಂದ್ರನನ್ನು ಶಿರದಲ್ಲಿ ಧರಿಸಿದ ಈಶ್ವರನಿಗೆ ಸುಶಾರೀರವಿದೆ. ಆತ ಸುಸ್ವರ ರೂಪನಾಗಿದ್ದಾನೆಂಬುದು ಕೃತಿಕರ್ತರ ಮಾತು. ಈ ಸಂದರ್ಭದಲ್ಲಿ ತ್ಯಾಗರಾಜರ **ನಾದಸುಧಾರಸಂಬಿಲನು** (ಆರಭಿರಾಗ) ಕೃತಿಯನ್ನು ಸ್ಮರಿಸಬಹುದು. ಅವರು ಈ ಕೃತಿಯಲ್ಲಿ, ನಾದಸುಧೆಯೆ ಭೂಮಿಯಲ್ಲಿ ನರಾಕೃತಿಯಾಗಿದೆ ಎಂದಿದ್ದಾರೆ. ಮಾನವಾಕೃತಿಯಲ್ಲಿ ಅವತರಿಸಿದ ಶ್ರೀರಾಮನ ಕೋದಂಡಕ್ಕೆ ಕಟ್ಟಿದ ಏಳು ಗಂಟೆಗಳೇ ಏಳುಸ್ವರಗಳು ಎನ್ನುತ್ತಾರೆ. ತ್ಯಾಗರಾಜರು ಶ್ರೀರಾಮನ ಕೋದಂಡಕ್ಕೆ ಕಟ್ಟಿದ ಗಂಟೆಗಳನ್ನು ಸ್ವರಗಳಿಗೆ ಹೋಲಿಸಿದರೆ, ಭಾಗವತರು ಇಲ್ಲಿ ಸೋಮಾಸ್ಕಂದನೇ ಸುಸ್ವರ ರೂಪದಲ್ಲಿದ್ದಾನೆನ್ನುತ್ತಾರೆ. ಒಟ್ಟಾರೆ ಈಶ್ವರನು ಸಂಗೀತರೂಪಿ ಎಂಬುದು ಇಲ್ಲಿನ ಭಾವ.

ಈ ಕೃತಿಯು ರಚಿತವಾಗಿರುವ ರಾಗ ಶುದ್ಧಧನ್ಯಾಸಿ. ಕೆಲವೊಮ್ಮೆ ಈ ರಾಗವನ್ನೇ ಉದಯರವಿಚಂದ್ರಿಕೆ ಎಂದೂ ವ್ಯವಹರಿಸುವುದುಂಟು. ಈ ರಾಗ ಕೆಲವರ ಪ್ರಕಾರ 20ನೇ ಮೇಳದಲ್ಲಿ ಇನ್ನು ಕೆಲವರ ಪ್ರಕಾರ 22ನೇ ಮೇಳದಲ್ಲಿ ಜನ್ಯವೆನ್ನಲಾಗಿದೆ. ರಿಷಭ ದೈವತ ವರ್ಜ್ಯವಾದ ಔಡವ ಉಪಾಂಗರಾಗ ಇದಾಗಿದೆ. ರಾಗದ ಆರೋಹಣ ಅವರೋಹಣಗಳು, **ಸ ಗ ಮ ಪ ನಿ ಸ – ಸ ನಿ ಪ ಮ ಗ ಸ.** ತ್ಯಾಗರಾಜರ **ಎಂತನೇರ್ಚಿನ,** ಮುತ್ತಯ್ಯಭಾಗವತರ **ಶ್ರೀರಾಜಮಾತಂಗಿ** (ವರ್ಣ) ರಚನೆಗಳು ಪ್ರಸಿದ್ಧವಾದವು. ಪ್ರಸ್ತುತ, ಭಾಗವತರ ಕಾಲಾತೀತಾಯ ಕೃತಿಯಲ್ಲಿ ಸೇರಿಸಿರುವ ಚಿಟ್ಟೆಸ್ವರವು ತುಂಬಾ ಸುಂದರವಾಗಿದೆ. **ಗಮ – ಗಪ – ಮನಿ – ಪನಿ** ಎಂಬ ದಾಟುಸ್ವರಗಳು, **ಪಮಗಸ – ನೀಪಮಗಸ – ಸಸಾನಿಪಮಗಸ** ದಂಥ ಸ್ರೋತೋವಹಯತಿ ಮಾದರಿ ಜೋಡಣೆ **ಸ ಗ ಗ ಮ ಮ ಗ ಗ ಸ** ದಂಥ

ಜಂಟಿ ಸ್ವರಗಳ ಜೋಡಣೆಯೂ ಚಿಟ್ಟೆಸ್ವರದಲ್ಲಿ ಕಾಣಬರುತ್ತವೆ. ಕೃತಿಯ ಆರಂಭದಲ್ಲೇ ಶಿವಾಷ್ಟೋತ್ತರಶತದ 12ನೇ ನಾಮ ಹೇಳಲ್ಪಟ್ಟಿದೆ.

ವಿಷ್ಣುವಲ್ಲಭಾಯ ನಮಃ

## 13. ವಿಷ್ಣುವಲ್ಲಭ ವಿರೂಪಾಕ್ಷ

ರಾಗ – ತೋಡಿ ಆದಿತಾಳ

**ವಿಷ್ಣುವಲ್ಲಭ ವಿರೂಪಾಕ್ಷ ವೇದರೂಪ ವಿಮಲ ಸಚ್ಚಿದಾನಂದ॥**
**ಜಿಷ್ಣು ಪೂಜಿತ ತ್ರಿನಯನ ವರದ ಚಿದಂಬರ ಚಿದ್ವಿಲಾಸ। ತೇಜೋಮಯ ವಿಗ್ರಹ॥**
**ಪಂಕಜಭವಾದಿ ಸುರಪೂಜಿತಪದ। ಪಂಕಜಹಿತ ಶಶಿವಹ್ನಿನೇತ್ರ।**
**ಕಂಕಣಪುರಹರ ಕಾಮಾಂತಕ ಶಿವ। ಶಂಕರ ಹರಿಕೇಶ ಮಾಂ ಪಾಲಯ ॥**

ಕೃತಿಯ ಕಡೆಯಲ್ಲಷ್ಟೇ ನನ್ನನ್ನು ರಕ್ಷಿಸು ಎಂಬ ಪ್ರಾರ್ಥನಾ ಪದವಿದೆಯಾಗಲೀ ಉಳಿದಂತೆ ಈಶ್ವರನ ನಾಮಸಂಕೀರ್ತನೆಯೇ ಸಾಹಿತ್ಯವಾಗಿದೆ. ವಿಷ್ಣುವಿನ ಒಡೆಯನೂ ಇಂದ್ರಪೂಜಿತನೂ, ವಿಮಲನೂ, ವೇದರೂಪನೂ, ತೇಜೋಮಯನೂ ಆದ ಈಶ್ವರ ಇಲ್ಲಿದ್ದಾನೆ. ಬ್ರಹ್ಮಾದಿ ದೇವತೆಗಳಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನು. ಕಮಲಹಿತನೂ, ಸೂರ್ಯಚಂದ್ರರನ್ನೇ ನೇತ್ರವಾಗುಳ್ಳವನೂ, ಕಾಮನನ್ನು ಸಂಹರಿಸಿದ ಶಿವಶಂಕರನೂ ಆದ ಈಶ್ವರನನ್ನು ಪ್ರಾರ್ಥಿಸಿ ವಾಗ್ಗೇಯಕಾರರು ತಮ್ಮ ರಕ್ಷಣೆಗಾಗಿ ಕೇಳಿಕೊಂಡಿದ್ದಾರೆ.

ವಿಷ್ಣು–ಜಿಷ್ಣು (ಜಿಷ್ಣು – ಇಂದ್ರ), ಪಂಕಜ – ಕಂಕಣ – ಶಂಕರ ಎಂಬಲ್ಲಿ ದ್ವಿತೀಯಾಕ್ಷರ ಪ್ರಾಸವಿದೆ. ಪಂಕಜಭವ – ಪಂಕಜಹಿತ ಇಲ್ಲಿ ಯಮಕಾಲಂಕಾರಗಳು ಹಾಗೂ ಸುಂದರವಾದ ದಾಟುಸ್ವರಗಳುಳ್ಳ ಕ್ಲಿಷ್ಟ ಚಿಟ್ಟೆಸ್ವರವೂ ಕಾಣಬರುತ್ತವೆ.

ಈ ಕೃತಿಯ ವಿಶೇಷವಾದ ಇನ್ನು ಕೆಲವು ಅಂಶವೆಂದರೆ, ಈಶ್ವರನು ತ್ರಿನಯನ–ಚಿದಂಬರ–ಚಿದ್ವಿಲಾಸ–ತೇಜೋಮಯ ವಿಗ್ರಹ, ವೇದರೂಪ ಎಂಬ ಪದಗಳ ಅಳವಡಿಕೆ. ಅಗ್ನಿಯೇ ಈಶ್ವರನ ತಲೆ, ಸೂರ್ಯ ಚಂದ್ರರೇ ಅವನ ಕಣ್ಣುಗಳು, ವೇದವೇ ಅವನ ಮುಖ (ಮಾತು) ಎಂದು ಮುಂಡಕೋಪನಿಷತ್ತು ಹೇಳುತ್ತದೆ.

**ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ**
**ದಿಶಃ ಶ್ರೋತ್ರೇ ವಾಗ್ವಿವೃತಾಶ್ಚವೇದಾಃ ।**

ಸಕಲವೇದಗಳಿಗೆ ಮೂಲವಾದ ಪ್ರಣವಸ್ವರೂಪನೂ, ಆತನಿಂದಲೇ ಹೊರಹೊಮ್ಮಿದ ವೇದಗಳ ರೂಪನೂ, ವೇದದ ಅಂತಿಮ ತಾತ್ಪರ್ಯನೂ ಆಗಿದ್ದಾನೆ. ಆತ ಸಕಲಶೃತಿಸಾರನೂ ಆಗಮಗೋಚರನೂ,

ಆಗಿದ್ದಾನೆ. ಇನ್ನು ವಿಮಲ–ಶುದ್ಧವಾದ ಸಚ್ಚಿದಾನಂದ – ಸತ್ ಚಿತ್ ಆನಂದಗಳು. ಇವು ಈಶ್ವರನ ಸ್ವರೂಪವೇ ಹೌದು.

ಇನ್ನು, ಕೃತಿ ಅಳವಟ್ಟಿರುವ ತೋಡಿರಾಗವು 8ನೇ ಮೇಳರಾಗ. ಹನುಮ ಎಂಬ ಮುಂಪ್ರತ್ಯಯಹೊಂದಿ ಹನುಮತೋಡಿ ಎನಿಸುತ್ತದೆ. ಆರೋಹಾವರೋಹಗಳು, **ಸ ರಿ ಗ ಮ ಪ ದ ನಿ ಸ – ಸ ನಿ ದ ಪ ಮ ಗ ರಿ ಸ.** ದೀರ್ಘಾಲಾಪನೆಗೆ ಅವಕಾಶವುಳ್ಳ ಕರುಣೆ, ಭಕ್ತಿರಸಗಳನ್ನು ಪ್ರಧಾನವಾಗಿ ಸೂಸುವ, ಪ್ರಸಿದ್ಧವಾದ ಈ ರಾಗದಲ್ಲಿ ಬಹುತೇಕ ಎಲ್ಲ ವಾಗ್ಗೇಯಕಾರರೂ ರಚನೆಗಳನ್ನು ಸೃಷ್ಟಿಸಿದ್ದಾರಾದರೂ ತ್ಯಾಗರಾಜರೊಬ್ಬರೇ 30ಕ್ಕೂ ಅಧಿಕ ರಚನೆಗಳನ್ನು ಈ ರಾಗದಲ್ಲಿ ರಚಿಸಿದ್ದಾರೆಂಬುದು ಗಮನಾರ್ಹ. ಈ ರಾಗದ ಪ್ರಸಿದ್ಧವಾದ ಕೆಲವು ರಚನೆಗಳೆಂದರೆ, **ಆರೇರೆ ದಶರಥ** (ಗೀತೆ) **ಏರಾನಾಪೈ, ಕನಕಾಂಗಿ, ರೂಪಮುಜುಚಿ** ವರ್ಣಗಳು, **ರಾವೇ ಹಿಮಗಿರಿ ಕುಮಾರಿ** ಸ್ವರಜತಿ, **ಎಂದುದಾಗಿನಾಡೋ, ಕೊಲುವಮರೆಗದಾ, ಕದ್ದನುವಾರಿಕಿ, ಏಮಿಜೇಸಿತೇನೇಮಿ, ದಾಚುಕೋವಲೆನಾ, ಕಮಲಾಂಬಿಕೆ** ಕೃತಿ ಮುಂತಾದವು ಈ ರಾಗದಲ್ಲಿವೆ.

ಶಿವಾಷ್ಟೋತ್ತರಶತದ 13ನೇ ನಾಮದಿಂದ ಕೃತಿಸಾಹಿತ್ಯ ಆರಂಭವಾಗಿದೆ.

ಶಿಪಿವಿಷ್ಟಾಯ ನಮಃ

## 14. ಶಿಪಿವಿಷ್ಟಂ ನಮಾಮ್ಯಹಂ

**ರಾಗ – ಬಿಲಹರಿ** **ಮಿಶ್ರಛಾಪುತಾಳ**

**ಶಿಪಿವಿಷ್ಟಂ ನಮಾಮ್ಯಹಂ ಚಿಂತಿತ ಫಲಪ್ರದಂಶಿವಂ।**
**ಕಪಾಲಿನಂ ಹರಂ ಗಂಗಾಧರಂ ವರಂ**
**ಅಪವರ್ಗ ಫಲದಂ ಆನಂದಕಂದಂ।**
**ಮುಕುಂದಾದ್ಯುಪಾಸಿತಂ ಸುರಮುನಿಬೃಂದಂ ಸೇವಿತಂಶುಭಂ।**
**ಅಕಳಂಕಂ ಆದಿನಾಯಕಂ ಅಮಿತಸುಖದಂ ಹರಿಕೇಶಂ॥**

ಭಕ್ತರ ಮನೋಭೀಷ್ಟವನ್ನು ನೀಡುವ ಮಂಗಳಕರ ಶಿವನಿಗೆ ನಾನು ನಮಸ್ಕರಿಸುತ್ತೇನೆ. ಕಪಾಲಿಯಾದ ಹರನು ಗಂಗಾಧರನೂ, ಶ್ರೇಷ್ಠನೂ, ಆನಂದರೂಪಿಯೂ, ಮುಕುಂದನೇ ಮೊದಲಾದ ದೇವತೆಗಳಿಂದ ಸೇವಿಸಲ್ಪಟ್ಟವನೂ, ಅಕಳಂಕನೂ, ಆದಿನಾಯಕನೂ ಆದವನು. ತನ್ನ ಭಕ್ತರಿಗೆ ಈತ ಮಿತಿಯಿಲ್ಲದಷ್ಟು ಸುಖವನ್ನೂ ಅಪವರ್ಗವನ್ನೂ ನೀಡುವ ದೇವರಾಗಿದ್ದಾನೆ. ಅಂಥವನಿಗೆ ನಾನು ನಮಸ್ಕರಿಸುತ್ತೇನೆ ಎಂದು ಮುತ್ತಯ್ಯಭಾಗವತರಿಲ್ಲಿ ಹಾಡಿದ್ದಾರೆ.

ಅಕಳಂಕನೆಂಬುದು ದೇವರಿಗೆ ಕೆಟ್ಟಗುಣಗಳೇ ಇಲ್ಲ ಎಂಬುದನ್ನು ಸೂಚಿಸುತ್ತದೆ. ಎಂದರೆ ಈಶ್ವರ ಭವ್ಯಗುಣಮಣಿಕೋಶ, ಕಲ್ಯಾಣ ಸುಗುಣನಿಧಿ, ಅಗಣಿತ ಗುಣಗಣ, ಸುಗುಣಪಾರಾವಾರನೆಂಬುದು ಅರ್ಥ. ಆತನ ಸದ್ಗುಣಗಳಿಗೆ ಸಾಟಿಯೇ ಇಲ್ಲ. ಭಾಗವತರು ಕೆಲವೊಮ್ಮೆ ಈಶ್ವರನನ್ನು ಹೀಗೆ ಸುಗುಣನೆಂದೂ ಕರೆದಿದ್ದಾರೆ. ಹಾಗೆಯೇ ಅಪವರ್ಗ ಎಂದರೆ ಮೋಕ್ಷ ಎಂದು ಅರ್ಥ. ಈಶ್ವರನು ಮೋಕ್ಷಪ್ರದನೆಂಬುದನ್ನೂ ಶಿವಾಷ್ಟೋತ್ತರಶತ ಕೃತಿಗುಚ್ಛದಲ್ಲಿನ ಹಲವು ಕೃತಿಗಳಲ್ಲಿ ಪ್ರಸ್ತಾಪಿಸಿದ್ದಾರೆ.

ಶಿಪಿವಿಷ್ಟಂ ಎಂದಾರಂಭವಾಗುವ ಈ ಕೃತಿಯು ಬಿಲಹರಿ ರಾಗದಲ್ಲಿ ನಿಯೋಜಿತವಾಗಿದೆ. ಬಿಲಹರಿಯು 29ನೇ ಶಂಕರಾಭರಣ ಮೇಳದಲ್ಲಿ ಔಡವ ಸಂಪೂರ್ಣ ಭಾಷಾಂಗರಾಗ. ಕೈಶಿಕ ನಿಷಾದವು ಅನ್ಯಸ್ವರ. ಆರೋಹಣ ಅವರೋಹಣಗಳು, **ಸ ರಿ ಗ ಪ ದ ಸ – ಸ ನಿ ದ ಪ ಮ ಗ ರಿ ಸ.**
**ಪ ದ ನಿ ಪ ದ ಪ, ಪ ನಿ ದ ಪ** ಸಂಚಾರಗಳಲ್ಲಿ ಅನ್ಯಸ್ವರ ಪ್ರಯೋಗವಾಗುತ್ತದೆ. ವೀರ ಮತ್ತು ಭಕ್ತಿರಸ ಪ್ರಧಾನವಾದ ಈ ರಾಗದಲ್ಲಿ ಜಂಟಿ, ದಾಟುಸ್ವರ ಪ್ರಯೋಗಗಳು ವಿಶೇಷ ರಂಜನೆ ನೀಡುವುದು. ಜತಿಸ್ವರ, ವರ್ಣಗಳು, ಹಲವು ಕೃತಿಗಳೇ ಅಲ್ಲದೆ ಇನ್ನಿತರ ರಚನೆಗಳೂ ಈ ರಾಗದಲ್ಲಿ ಲಭ್ಯವುಂಟು. ಕೆಲವು ಪ್ರಮುಖ ರಚನೆಗಳೆಂದರೆ, ಸೊಂಟಿ ವೆಂಕಟಸುಬ್ಬಯ್ಯನವರ **ನೆನರುಂಚ** ವರ್ಣ, ವೀಣಾಕುಪ್ಪಯ್ಯರ್ ಅವರ **ಇಂತಚೌಕ** ವರ್ಣ, ತ್ಯಾಗರಾಜರ **ದೊರಕುನಾ ಇಟುವಂಟಸೇವ, ನಾಜೀವಾಧಾರ, ಕನುಗೊಂಟಿನಿ ಇಂತಕನ್ನಾನಂದಮೇಮಿ,** ಮುತ್ತುಸ್ವಾಮಿದೀಕ್ಷಿತರ **ಶ್ರೀಬಾಲಸುಬ್ರಹ್ಮಣ್ಯಾಗಚ್ಛ, ಹಾಟಕೇಶ್ವರ,** ಪಟ್ಣಂ ಸುಬ್ರಹ್ಮಣ್ಯ

ಅಯ್ಯರರ **ಪರಿದಾನಮಿಚ್ಚಿತೇ,** ಮೈಸೂರು ವಾಸುದೇವಾಚಾರ್ಯರ **ಶ್ರೀಚಾಮುಂಡೇಶ್ವರಿ,** ತಿರುವೊಟ್ರಿಯೂರ್ ತ್ಯಾಗಯ್ಯರ್ ಅವರ **ಸಾರಸದಳನಯನ** ಮುಂತಾದವು.

ಶಿವಾಷ್ಟೋತ್ತರಶತದಲ್ಲಿನ 14ನೇ ನಾಮವಾದ ಶಿಪಿವಿಷ್ಟ ಎಂಬ ಪರಮೇಶ್ವರನ ನಾಮದಿಂದಲೇ ಕೃತಿಯಾರಂಭವಾಗಿದೆ. ಕೃತಿಗೆ ಚಿಟ್ಟೆಸ್ವರವೂ ಸಂಯೋಜಿತವಾಗಿದೆ.

ಅಂಬಿಕಾನಾಥಾಯ ನಮಃ

## 15. ಅಂಬಿಕಾನಾಥಂ ಅಖಿಲೇಶಂ

ರಾಗ – ಭೂಪಾಲ ಆದಿತಾಳ

ಅಂಬಿಕಾನಾಥಂ ಅಖಿಲೇಶಂ ವಂದೇ।
ತುಂಬುರು ನಾರದಾದಿ ನುತಂ ಶಂಭುಂ
ಸೋಮಕಲಾಶೋಭಿತಂ ಪ್ರಭುಂ॥
ಸಕಲ ಸಂಪತ್ಪ್ರದ ಸಚ್ಚಿದಾಕಾರಂ
ಸಕಲ ವೇದಸಾರಂ ಸಜ್ಜನ ಪರಿವಾರಂ
ಮುಕುಂದಾದಿನುತಂ ಮೂಲಕಾರಣಂ
ಅಕಳಂಕಂ ಶ್ರೀಹರಿಕೇಶ ಲಿಂಗಂ॥

ಮುತ್ತಯ್ಯಭಾಗವತರು ಈ ಕೃತಿಯಲ್ಲಿ ಜಗತ್ತಿನ ಎಲ್ಲಕ್ಕೂ ಒಡೆಯನಾದ ಪರಮೇಶ್ವರನಿಗೆ ವಂದಿಸುತ್ತಿದ್ದಾರೆ. ಪರಮೇಶ್ವರನು ಸಂಗೀತ ಪ್ರಿಯನೂ, ಸಂಗೀತಲೋಲನೂ, ಸಂಗೀತರೂಪನೂ ಆದ್ದರಿಂದ, ಸಂಗೀತಸಾಧನದಿಂದ ಆತನನ್ನು ಒಲಿಸಿಕೊಳ್ಳುವುದು ಸುಲಭ ಎಂಬ ನಂಬುಗೆ ಇದೆ. ಹೀಗಾಗಿ ಅದೆಷ್ಟೋ ಸಂಗೀತೋಪಾಸಕರು ಸಂಗೀತ ಮಾಧ್ಯಮದ ಮೂಲಕ ಮುಕ್ತಿಪಡೆದಿದ್ದಾರೆಂಬುದುಂಟು. ಈ ಸಂದರ್ಭದಲ್ಲಿ ಕೆಳಗಿನ ಒಂದೆರಡು ಶ್ಲೋಕಗಳನ್ನು ಸ್ಮರಿಸಬಹುದು.

**ನಾದೋಪಾಸನಯಾ ದೇವ ಬ್ರಹ್ಮ ವಿಷ್ಣು ಮಹೇಶ್ವರಃ।**
**ಭವಂತ್ಯುಪಾಸಿತಾನೂನಂ ಯಸ್ಮಾದೇತೇ ತದಾತ್ಮಕಾಃ॥**

ತ್ರಿಮೂರ್ತಿಗಳೂ ನಾದಸ್ವರೂಪರೇ ಹೌದು. ಆದ್ದರಿಂದ ಅವರು ನಾದದಿಂದಲೇ ಉಪಾಸಿಸಲ್ಪಡುತ್ತಾರೆ.

**ಗೀತೇನ ಪ್ರಿಯತೇ ದೇವಃ ಸರ್ವಜ್ಞಃ ಪಾರ್ವತೀ ಪತಿಃ ।**

ಸರ್ವಜ್ಞನಾದ ಪರಶಿವನು ಗೀತದಿಂದ ಸುಪ್ರೀತನಾಗುತ್ತಾನೆ. ಇಲ್ಲಿ ಭಕ್ತಿಭಂಡಾರಿ ಬಸವಣ್ಣನವರ ಒಂದು ಮಾತೂ ಉಲ್ಲೇಖಾರ್ಹ.

**ಕಿಂಚಿತುಗೀತ ಒಂದನಂತಕೋಟಿ ಜಪ.** ಸ್ವಲ್ಪ ಸಂಗೀತವೇ ಅನಂತಕೋಟಿ ಜಪಕ್ಕೆ ಸಮಾನವೆನಿಸಿದೆ. ಇಂಥ ಉಲ್ಲೇಖಗಳು ಸಂಗೀತ ಮಾಧ್ಯಮದ ಮಹತ್ವವನ್ನು ತಿಳಿಸಿ, ಆ ಮೂಲಕ ಭಗವದಾರಾಧನೆ ಸುಲಭವೂ, ಫಲಪ್ರದವೂ ಹೌದೆಂಬುದನ್ನು ಮನದಟ್ಟು ಮಾಡುತ್ತದೆ. ವಾಸ್ತವವಾಗಿ, ಸಂಗೀತದ ಲಾಭ ಲೋಕರಂಜನೆ ಭವಭಂಜನೆಯೇ ಅಲ್ಲವೇ? ತುಂಬುರು ನಾರದಾದಿಗಳು ಮುನಿಪುಂಗವರಷ್ಟೇ ಅಲ್ಲ,

ಸಂಗೀತ ಲಕ್ಷ್ಯಲಕ್ಷಣ ಕೋವಿದರೂ ಹೌದು. ಅಂಥವರಿಂದಲೂ ಸಂಗೀತದ ಮೂಲಕ ಸ್ತುತಿಸಲ್ಪಟ್ಟಿದ್ದಾನೆ ಪರಮೇಶ್ವರ.

ಪ್ರಸ್ತುತಕೃತಿ ಭೂಪಾಲರಾಗದಲ್ಲಿ, ಶಿಲಾಷ್ಟೋತ್ತರದ 15ನೇ ನಾಮದಿಂದಲೇ ಆರಂಭವಾಗಿದೆ. ಭೂಪಾಲವು ಎಂಟನೇ ಮೇಳದಲ್ಲಿ ಜನ್ಯವಾದ ಔಡವರಾಗ, ಉಪಾಂಗರಾಗ. ಮಧ್ಯಮ ನಿಷಾದಗಳು ವರ್ಜ್ಯವಾದ ಈ ರಾಗದಲ್ಲಿ **ಸ ರಿ ಗ ಪ ದ ಸ – ಸ ದ ಪ ಗ ರಿ ಸ** ಎಂಬುದು ರಾಗದ ಆರೋಹಾವರೋಹಗಳಾಗಿವೆ. ರೇವಗುಪ್ತಿ, ಬೌಳಿ ರಾಗಗಳು ಭೂಪಾಲಕ್ಕೆ ಹತ್ತಿರದ ರಾಗಗಳಾಗಿವೆ. ಭೂಪಾಲರಾಗದ ಒಂದೆರಡು ಪ್ರಸಿದ್ಧ ರಚನೆಗಳೆಂದರೆ, ಮುತ್ತುಸ್ವಾಮಿದೀಕ್ಷಿತರ **ಸದಾಚಲೇಶ್ವರಂ,** ತ್ಯಾಗರಾಜರ **ದೀನಜನಾವನ.** ಅಂಜಿಕಾನಾಥನೆಂದಾರಂಭವಾಗಿರುವ ಮುತ್ತಯ್ಯಭಾಗವತರ ಪ್ರಸ್ತುತ ರಚನೆಯ ಚಿಟ್ಟೆಸ್ವರದಲ್ಲಿ **ದ ದ ಪ ಪ ಗ ರಿ ಸಾ – ಸ ರಿ ದಾ ಸ ರಿ ಗಾ – ದ ಪ ದಾ ಪ ಗ ಪಾ – ದ ರಿ ದ ಸ ರಿ ಪ ದ ಸ ರಿ – ಗ ರಿ ರಿ ಸ ದ ದ ಪ ಗ ಗ ರಿ ರಿ ಸ** ದಂತಹ ಸ್ವರಜೋಡಣೆ ಇದೆ.

ಶ್ರೀಕಂಠಾಯ ನಮಃ

## 16. ಶ್ರೀಕಂಠ ದಯಾನಿಧೇ ಚಿತ್ಸಭೇಷ

**ರಾಗ – ಸಾಲಗಭೈರವಿ** **ರೂಪಕತಾಳ**

**ಶ್ರೀಕಂಠ ದಯಾನಿಧೇ ಚಿತ್ಸಭೇಷ ದಯಾನಿಧೇ।**
**ಲೋಕನಾಥ ರುಚಿರಗುಣ ಪಾಕಶಾಸನಾದಿ ವಿನುತ॥**
**ಪಾರ್ವತೀಪ್ರಿಯ ಭಕ್ತಹಿತ ಪಾಹಿಮಾಂ ಸುರವರದ।**
**ಶರ್ವರೀಶಧರ ಶ್ರೀಕರ ಸರ್ವಶ್ರೀ ಹರಿಕೇಶ॥**

ಪರಮೇಶ್ವರನು ಕೃಪಾಲವಾಲನೂ, ಕರುಣಾಸ್ವಾಂತನೂ, ದಯಾನಿಧಿಯೂ ಹೌದು. ಹೀಗೆಂದೇ ಮುತ್ತಯ್ಯಭಾಗವತರು ಭಕ್ತಹಿತನಾದ ಶ್ರೀಕಂಠನಲ್ಲಿ ನನ್ನನ್ನು ರಕ್ಷಿಸು ಎಂದು ಪ್ರಾರ್ಥಿಸುತ್ತಾರೆ. ದಯಾನಿಧೇ, ದಯಾನಿಧೇ ಎಂದು ಮತ್ತೆ ಮತ್ತೆ ಶಿವನನ್ನು ಸಂಬೋಧಿಸುವಲ್ಲಿ ವಿಶೇಷತೆಯುಂಟು. ಏಕೆಂದರೆ ಭಗವಂತನ ದಯೆಗೆ ಕೆಲವು ಲಕ್ಷಣಗಳನ್ನು ಹೇಳುತ್ತಾರೆ. ಅವೆಂದರೆ, ಭಗವಂತನ ದಯೆ ಅಮಿತವಾದದ್ದು ಎಂದರೆ ಅದಕ್ಕೆ ಮಿತಿಯೇ ಇಲ್ಲ. ಅದು ಸಾರ್ವತ್ರಿಕ ಮತ್ತು ಸಾರ್ವಕಾಲಿಕ. ಎಂದರೆ ದೇಶ, ಕಾಲ, ವರ್ಗ ಯಾವುದೇ ಭೇದ ಅದಕ್ಕಿಲ್ಲ. ಎಲ್ಲಕಾಲದಲ್ಲೂ, ಎಲ್ಲ ವರ್ಗದವರಿಗೂ ಲಭ್ಯವಾಗಬಹುದಾದುದು. ಇನ್ನು, ದಯೆಯು ನಿರ್ಹೇತುಕವಾದುದು. ಎಂದರೆ ದೇವರು ಜೀವರಿಂದ ಯಾವುದೇ ಪ್ರತಿಫಲವನ್ನು ನಿರೀಕ್ಷಿಸದೆ ತನ್ನ ದಯೆಬೀರುತ್ತಾನೆ. ಈ ಕಾರಣಗಳಿಂದಲೇ ಭಾಗವತರಿಲ್ಲಿ ಲೋಕನಾಥನಾದ, ಭಕ್ತಿಹಿತನಾದ ಶ್ರೀಕರನನ್ನು ದಯಾನಿಧೇ ದಯಾನಿಧೇ ಪಾಹಿಮಾಂ ಎಂದು ಪ್ರಾರ್ಥಿಸಿದ್ದಾರೆ. ಇಲ್ಲಿ ಚಿತ್ರಣಗೊಂಡ ಈಶ್ವರನು ಚಿತ್ಸಭೇಷನೂ, ಚಂದ್ರಧರನೂ (ಶರ್ವರಿ–ರಾತ್ರಿ), ಇಂದ್ರಾದಿ ದೇವತೆಗಳಿಂದ ಸ್ತುತಿಸಲ್ಪಟ್ಟವನೂ ಆಗಿದ್ದಾನೆ.

ಕೃತಿಯು ಸ್ವಲ್ಪ ಅಪರೂಪವಾದ ಸಾಲಗಭೈರವಿ ರಾಗದಲ್ಲಿದೆ. ಸಾಲಗಭೈರವಿಯು 22ನೇ ಮೇಳದಲ್ಲಿ ಜನ್ಯವಾದ ಔಡವಸಂಪೂರ್ಣ ಉಪಾಂಗರಾಗ. ಆರೋಹಾವರೋಹಗಳು, **ಸ ರಿ ಮ ಪ ದ ಸ – ಸ ನಿ ದ ಪ ಮ ಗ ರಿ ಸ.**

ತಿರುವೊಟ್ರಿಯೂರ್ ತ್ಯಾಗಯ್ಯರ್ ವಿರಚಿತ **ಮಾಧವ ನಿನುಮದಿ**, ವೀಣಾಕುಪ್ಪಯ್ಯರ್ ವಿರಚಿತ **ಸಾಮಗಾನಲೋಲ**, ಭಾಗವತರದೇ ಆದ **ದಂಡಿನಿ ಶ್ರೀ ಚಾಮುಂಡಾಂಬಿಕೆ** ರಚನೆಗಳು ಈ ರಾಗದಲ್ಲಿವೆ. ಇನ್ನು ತ್ಯಾಗರಾಜಕೃತವಾದ **ಪದವಿ ನೀ ಸದ್ಭಕ್ತಿಯು ಗಲ್ಗುಟೇ** ಕೃತಿ ಪ್ರಸ್ತುತ ಸಂದರ್ಭದಲ್ಲಿ ಬಹಳ ಅರ್ಥಪೂರ್ಣ. ಏಕೆಂದರೆ ಇಂದು ಪದವೀಧರರಲ್ಲದವರು ವಿರಳ. ಆದರೆ ಭಗವಂತನಲ್ಲಿ ನಂಬಿಕೆಯಿಟ್ಟು ನೈತಿಕ ಬುನಾದಿಯಿಂದ ಬಾಳುವವರದೆಷ್ಟು ಮಂದಿಯೋ ತಿಳಿಯದಾಗಿದೆ. ತ್ಯಾಗರಾಜರ ಪ್ರಕಾರ ವೇದಶಾಸ್ತ್ರಗಳನ್ನೋದಿದರೂ ಅದರ ಸತ್ವವಾಗಿರುವ ಭಗವಂತನನ್ನು ಅರಿಯದಿರುವುದು ಪದವಿಯೇ ಅಲ್ಲ. ಆದ್ದರಿಂದ ನಿಜಜ್ಞಾನ ಪಡೆದು ನಿತ್ಯಸತ್ಯವನ್ನು ಅರಿಯುವುದು ಪದವಿಯೆನಿಸುತ್ತದೆ.

ಇನ್ನು, ದೀಕ್ಷಿತರ ಪಂಥದಲ್ಲಿ ಈ ರಾಗವು **ಸ ರಿ ಗ ಮ ಪ ದ ಪ ಸ – ಸ ನಿ ದ ಪ ಮ ಗ ರಿ ಸ – ಸರಿ ಗರಿ ಪಮ ಪದ ಪಸ – ನಿಸ ದಪ ಮಗ ರಿಸ** ಎಂಬ ಆರೋಹಾವರೋಹಗಳನ್ನು ಹೊಂದಿದೆ. ಅವರ **ತ್ಯಾಗರಾಜೇನ ರಕ್ಷಿತೋಹಂ** ಕೃತಿಯು ಈ ರಾಗದಲ್ಲಿ ರಚಿತವಾಗಿದೆ. ಈ ರಾಗವೂ 22ನೇ ಖರಹರಪ್ರಿಯದಲ್ಲೇ ಜನ್ಯ ಎನಿಸಿದೆ.

ಶಿವಾಷ್ಟೋತ್ತರಶತದಲ್ಲಿ 16ನೇ ನಾಮ ಶ್ರೀಕಂಠ ಎಂಬುದು. ಇಲ್ಲಿ ಭಾಗವತರೂ ಅದೇ ನಾಮದಿಂದಲೇ 16ನೇ ಕೃತಿಯನ್ನು ಆರಂಭಿಸಿದ್ದಾರೆ. **ಪಾಮಗರಿ ಮಾಗರಿಸ ನಿಧಸಾ ಪಮಗರಿಸ ದಪಮಗರಿ ಸರಿಮಗರಿಗಸ** ಎಂಬ ಸ್ವರಜೋಡಣೆಗಳು ಚಿಟ್ಟೆಸ್ವರದಲ್ಲಿವೆ.

ಭಕ್ತವತ್ಸಲಾಯ ನಮಃ

## 17. ಭಕ್ತವತ್ಸಲ ಪರಮೇಶ್ವರ ಪಾಹಿಮಾಂ

**ರಾಗ – ಕರ್ನಾಟಕಬೇಹಾಗ್** **ರೂಪಕತಾಳ**

**ಭಕ್ತವತ್ಸಲ ಪರಮೇಶ್ವರ ಪಾಹಿಮಾಂ ಪಶುಪತೇ।**
**ಶಕ್ತಿವಲ್ಲಭ ಶಾಂತಸುಗುಣ ಮುಕ್ತಿದಾಯಕ ಮುರಾರಿನುತ॥**
**ದಾರುಕಾವನ ಮುನಿಗಣಸದಯ ಹೃತ್ತಾಪಕಾರಣ**
**ಮಾರವಿಜಯ ಮಹದೇವ ಮಧುರನಾಯಕ ಹರಿಕೇಶ॥**

ಪಶುಪತಿಯೇ, ಪರಮೇಶ್ವರನೇ, ಭಕ್ತವತ್ಸಲನೇ ನನ್ನನ್ನು ರಕ್ಷಿಸು. ಶಕ್ತಿಮಾತೆಯ ಪತಿಯಾದ ನೀನು ಶಾಂತನೂ, ಸದ್ಗುಣನೂ, ಮುಕ್ತಿನೀಡುವಾತನೂ ಆಗಿದ್ದೀಯೆ. ಮುರಾರಿಯಿಂದ ಸ್ತುತಿಸಲ್ಪಟ್ಟ ನೀನು ಮುನಿಗಳ ಹೃದಯದಲ್ಲಿ ನೆಲೆಸಿ ಅವರ ಹೃದಯದ ತಾಪನಿವಾರಕನಾಗಿದ್ದೀಯೆ. ಮನ್ಮಥನನ್ನು ಗೆದ್ದ ಮಹಾದೇವನೇ, ನನ್ನನ್ನು ಕಾಪಾಡು ಎಂದು ಮುತ್ತಯ್ಯಭಾಗವತರು ಪ್ರಸ್ತುತ ಕೃತಿಯಲ್ಲಿ ಬೇಡಿದ್ದಾರೆ.

ತನ್ನ ಭಕ್ತರನ್ನು ವಾತ್ಸಲ್ಯಪೂರ್ಣವಾಗಿ ಕಾಣುವಾತ ಭಕ್ತವತ್ಸಲ. ಜೀವರನ್ನು ಸಂಸಾರಬಂಧನದಿಂದ ಬಿಡಿಸಿ ಪಾಲಿಸುವಾತ ಪಶುಪತಿ. ಈತ ಪಾಶುಪತಾಸ್ತ್ರವನ್ನು ಅರ್ಜುನನಿಗೂ, ಕಾರ್ತಿಕೇಯನಿಗೂ ನೀಡಿದನೆಂಬುದು ಪುರಾಣೋಕ್ತಿ.

28ನೇ ಮೇಳದಲ್ಲಿ ಜನ್ಯವಾದ ಕರ್ನಾಟಕ ಬೇಹಾಗ್‌ನ ಆರೋಹಾವರೋಹಗಳು, **ಸ ರಿ ಗ ಮ ಪ ದ ನಿ ಸ – ಸ ನಿ ದ ನಿ ಪ ದ ಮ ಗ ರಿ ಗ ಸ.** ಉಪಾಂಗ ರಾಗವಾದ ಇದು ಅಷ್ಟೇನೂ ಪ್ರಸಿದ್ಧವಲ್ಲ. ಹೇಗೆಂದರೆ ಈ ರಾಗದಲ್ಲಿ ಹೆಚ್ಚಿನ ರಚನೆಗಳು ಕಾಣಬರದು. ಸುಪ್ರಸಿದ್ಧವಾದ ಒಂದು ಕೃತಿ ಇದರಲ್ಲಿದೆ. ಅದು **ನೇನೆಂದು ವೆದಕುದುರಾ**. ಈ ಕೃತಿ ತ್ಯಾಗರಾಜರಿಂದ ರಚಿತವಾದುದು. ಅವರ ಆರಾಧ್ಯದೈವ ಶ್ರೀರಾಮನ ಪಂಚಾಯತನ ಮೂರ್ತಿಯು ಕಾಣೆಯಾದಾಗ ಅತೀವ ದುಃಖದಿಂದ ಅವರು 'ಶ್ರೀಹರಿಯೇ, ನಾನು ನಿನ್ನನ್ನು ಎಲ್ಲಿ ಹುಡುಕಲಿ?' ಎಂದು ಹಾಡಿರುವ ಕೃತಿ ಇದಾಗಿದೆ.

ಪ್ರಸ್ತುತ ಕೃತಿಯೂ ಶಿವಾಷ್ಟೋತ್ತರಶತದ 17ನೇ ನಾಮ ಭಕ್ತವತ್ಸಲ ಎಂಬುದರಿಂದಲೇ ಆರಂಭವಾಗಿದೆ. ಭಕ್ತ, ಶಕ್ತಿ ಎಂಬ ಪ್ರಾಸ, ಹಾಗೂ ಪುಟ್ಟ ಚಿಟ್ಟೆಸ್ವರವೊಂದು ಕೃತಿಯಲ್ಲಿದೆ. ಇದು ಅತ್ಯಂತ ರಾಗಭಾವ ಪೂರ್ಣವಾಗಿ ಅಳವಟ್ಟಿದೆ.

ಭವಾಯ ನಮಃ

## 18. ಶ್ರೀಭವಂ ಚಿನ್ಮಯಂ ವಂದೇ

ರಾಗ – ಗರುಡಧ್ವನಿ ಮಿಶ್ರಛಾಪುತಾಳ

**ಶ್ರೀ ಭವಂ ಚಿನ್ಮಯಂ ವಂದೇ।**
**ಶುಭಾಕಾರಂ ಸುಗುಣಾಕರಂ ಇಭಚರ್ಮಾಂಬರಂ ಇಂದುಶೇಖರಂ॥**
**ಭುವನಾವನ ಚತುರಂ ಧೀರಂ ನವಗ್ರಹದೋಷ ಪರಿಹಾರಂ।**
**ಶಿವಂ ಶಂಕರಂ ಚಿದಾನಂದಂ ಭವಭಯಹರಂ ಪರಂ ಹರಿಕೇಶಂ॥**

ಮಂಗಳಕರನಾಗಿ ಅಸ್ತಿತ್ವದಲ್ಲಿರುವ (ಶ್ರೀಭವಂ) ಶಿವನೇ, ಚಿನ್ಮಯನೇ ನಿನಗೆ ವಂದನೆಗಳು. ನೀನು ಶುಭಾಕಾರನು, ಸುಗುಣಾಕರನು, ಕರಿಚರ್ಮಾಂಬರನು, ಚಂದ್ರಶೇಖರನು, ಭುವನವೆಂಬ ವನದ ಧೀರನು. ಪುನರ್ಜನ್ಮದ ಭಯವನ್ನು ಹೋಗಲಾಡಿಸುವಾತನು. ಅಂತಹ ನಿನಗೆ ನಮಸ್ಕಾರಗಳು ಎಂದು ಭಾಗವತರು ಈಶ್ವರನಿಗೆ ನಮಿಸುತ್ತಾರೆ.

ಇಲ್ಲಿ ಭವ ಎಂಬ ಪದವು ಎರಡು ಅರ್ಥಹೊಂದಿದೆ. ಶ್ರೀಭವಂ ಎಂದಾಗ ಶ್ರೀ–ಮಂಗಳಕರ ಭವ–ಅಸ್ತಿತ್ವದಲ್ಲಿರುವಾತ. ಇನ್ನೊಂದು ಅರ್ಥ ಪುನರ್ಜನ್ಮ.

ಶಿವನ ಶುಭಾಕಾರ ಇಂದ್ರಿಯಗೋಚರವಾದುದು. ಎಂದರೆ ಕಣ್ಣಿಗೆ ಕಾಣಿಸುವಂಥದ್ದು. ಆದರೆ ಇಂದ್ರಿಯ ವಿಷಯಗಳಂತೆ ಆ ನೋಟ, ಮನುಷ್ಯನನ್ನು ಅಧಃಪತನಕ್ಕೆ ತಳ್ಳುವುದಲ್ಲ, ಬದಲಾಗಿ ಅಧ್ಯಾತ್ಮಿಕ ಉತ್ತುಂಗಕ್ಕೆ ಏರಿಸುತ್ತದೆ. ಎಂತಲೇ ಅದು ಶಿವನ ಶುಭಾಕಾರ ಎನಿಸಿದೆ. ಮನಸ್ಸಿಗೆ ಆನಂದವನ್ನೂ ನೀಡುತ್ತದೆ.

ಈಶ್ವರನು ಜೀವರಿಗೆ ಉಂಟಾಗುವ ನವಗ್ರಹದೋಷಗಳನ್ನೂ ಪರಿಹರಿಸುವನೆಂದಿದ್ದಾರೆ, ಭಾಗವತರು. ಜೀವರಿಗೆ ಉಂಟಾಗುವ ಶುಭಾಶುಭಫಲಗಳು ಸೂರ್ಯಾದಿನವಗ್ರಹಗಳ ಚಲನೆಯ ಪರಿಣಾಮ ಎನ್ನುತ್ತವೆ, ವೇದಶಾಸ್ತ್ರಾದಿಗಳು. ಆದರೆ ಸೂರ್ಯಚಂದ್ರಾದಿ ಗ್ರಹಗಳಿಗೂ ಒಡೆಯನಾಗಿ ಅವರ ಚಲನೆಯನ್ನೂ ನಿಯಂತ್ರಿಸುವ ಈಶ್ವರನನ್ನು ವಂದಿಸುವುದರಿಂದ ನವಗ್ರಹ ದೋಷಗಳ ಪರಿಹಾರವಾಗುತ್ತದೆ ಎಂಬುದನ್ನು ಭಾಗವತರು ಈ ಕೃತಿಯಲ್ಲಿ ಉಲ್ಲೇಖಿಸುತ್ತಾರೆ.

ಪ್ರಸ್ತುತ ಕೃತಿಯು ಗರುಡಧ್ವನಿ ರಾಗದಲ್ಲಿ ರಚಿತವಾಗಿದೆ. 29ನೇ ಶಂಕರಾಭರಣದಲ್ಲಿ ಉಪಾಂಗ ಜನ್ಯರಾಗವಿದು. ಆರೋಹಣ ಅವರೋಹಣಗಳೆಂದರೆ **ಸ ರಿ ಗ ಮ ಪ ದ ನಿ ಸ – ಸ ದ ಪ ಗ ರಿ ಸ.** ಅಪರೂಪವಾದ ಈ ರಾಗದಲ್ಲಿ ತ್ಯಾಗರಾಜರ **ತತ್ವಮೆರುಗತರಮಾ, ಆನಂದಸಾಗರಮೀದನಿ,** ಪಲ್ಲವಿ

ಶೇಷಯ್ಯರ್ ಅವರ **ನೀತೋ ಚೆಪ್ಪಗ,** ಗರ್ಭಪುರಿಯವರ **ಏಮಿನೇರಮು** – ಇವು ಕೆಲವು ರಚನೆಗಳು. ಈ ರಾಗದ ಆರೋಹಾವರೋಹಗಳನ್ನು ತಿರುವು ಮುರುವು ಮಾಡಿ ಹಾಡಿದರೆ ಬಿಲಹರಿರಾಗದ ಆರೋಹ ಅವರೋಹ ಎನಿಸುತ್ತದೆ. ಚಿಕ್ಕದಾದ ಚೊಕ್ಕವಾದ ಒಂದು ಚಿಟ್ಟೆಸ್ವರವನ್ನು ಮುತ್ತಯ್ಯಭಾಗವತರು ಈ ಕೃತಿಗೆ ಅಳವಡಿಸಿದ್ದಾರೆ. ಅಷ್ಟೋತ್ತರಶತದ 18ನೇ ನಾಮದಿಂದಲೇ ಕೃತಿ ಆರಂಭವಾಗಿದೆ. ಚಿಟ್ಟೆಸ್ವರವು ಅತ್ಯಂತ ಚೇತೋಹಾರಿಯಾಗಿ ಹೀಗಿದೆ.

**ಸಾದಪಗಮ ಪದಪಗರಿಸರೀ ॥ ಗಮಪದ ಗರಿಗಮಪದನಿಸರೀ ॥**
**ಸರಿಗ ದನಿಸ ಗಮಪದನಿಸರಿಗ ॥ ಪಗರಿಸದಪ ಗರೀಗಮಪದನಿ ॥**

— ೦ —

ಶರ್ವಾಯ ನಮಃ

## 19. ಸರ್ವ ಸ್ವರೂಪಂ ಸರ್ವಂ ವಂದೇ

**ರಾಗ – ಕರ್ನಾಟಕಕಾಪಿ** **ಆದಿತಾಳ**

**ಸರ್ವಸ್ವರೂಪಂ ಸರ್ವಂ ವಂದೇ।**
**ನಿರ್ವಿಕಾರಗುಣಂ ನಿಷ್ಕಳಂ ನಿರಾಮಯಂ**
**ಪರ್ವತಸುತಾಲೋಲಂ ಭಕ್ತಪಾಲಂ॥**
**ಸಪ್ತಸ್ವರಕಾರಣ ಪಂಚವಕ್ತ್ರಂ**
**ಸಾರಸಪದಂ ಚಾರುಚರಿತ್ರಂ**
**ತಪ್ತ ತ್ರಿಪುರಂ ಶಂಕರಂ ಶಾಶ್ವತಂ**
**ಗುಪ್ತಂ ಗುಹತಾತಂ ಗುರುಂ ಹರಿಕೇಶಂ॥**

ವೇದಾಂತದ ಪ್ರಕಾರ ದೇವರ ಆಧಾರತ್ವವು ಆತನ ಸರ್ವವ್ಯಾಪಿತ್ವ ಮತ್ತು ಅಂತರ್ಯಾಮಿತ್ವಗಳನ್ನು ಸೂಚಿಸುತ್ತದೆ. ಈಶ್ವರನು ಪ್ರಪಂಚದೊಳಗೆ ಎಲ್ಲೆಲ್ಲೂ ವ್ಯಾಪಿಸುವ ಮೂಲಕ ಅದಕ್ಕೆ ಆಶ್ರಯನಾಗುತ್ತಾನೆ. **ಪುರುಷಸೂಕ್ತದ ಸ ಭೂಮಿಂ ವಿಶ್ವತೋ ವೃತ್ವಾ** ಎಂಬ ಶೃತಿಯ ಸಾಲು ಇಲ್ಲಿ ನೆನಪಾಗುತ್ತದೆ. ಈಶ್ವರನು ಬಾಹ್ಯಜಗತ್ತಿನಲ್ಲಷ್ಟೇ ವ್ಯಾಪಿಸಿಲ್ಲ. ಈ ಜಗತ್ತಿನ ಹೊರಗೂ ಇದ್ದಾನೆ. ಪುರುಷಸೂಕ್ತದ **ಅತ್ಯತಿಷ್ಠದ್ದಶಾಂಗುಲಂ** ಮತ್ತು ನಾರಾಯಣಸೂಕ್ತದ **ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣ ಸ್ಥಿತಃ** ಎಂಬ ಸಾಲುಗಳೂ ಗಮನಾರ್ಹ ಎನಿಸುತ್ತವೆ. ಒಟ್ಟಾರೆ ಪರಮೇಶ್ವರನು ಇಡೀ ಬ್ರಹ್ಮಾಂಡದ ಒಳಹೊರಗೆಲ್ಲ ವ್ಯಾಪಿಸಿದ್ದಾನೆ ಎಂಬ ವೇದಾಂತದ ಈ ಅಂಶವು ಪ್ರಸ್ತುತ ಕೃತಿಯ ಪಲ್ಲವಿ ಭಾಗದ ಸಾಹಿತ್ಯ **ಸರ್ವಸ್ವರೂಪಂ ಸರ್ವಂ** ಹಾಗೂ ಚರಣದಲ್ಲಿನ **ಶಾಶ್ವತಂ–ಗುಪ್ತಂ** ಎಂಬಲ್ಲಿ ನಿರೂಪಿತವಾಗಿದೆ ಎನ್ನಬಹುದು. ಇಂತಹ ಒಂದು ಶಕ್ತಿಗೆ ಕೃತಿಕರ್ತರು ನಮಸ್ಕರಿಸುತ್ತಿದ್ದಾರೆ.

ಈ ಕೃತಿಯ ಮಹತ್ತರವಾದ ಇನ್ನೊಂದು ವಿಷಯ, ಪಂಚಮುಖಿಗಳುಳ್ಳ ಈಶ್ವರನು ಸಪ್ತಸ್ವರಗಳ ಉಗಮಕ್ಕೆ ಕಾರಣನಾಗಿದ್ದಾನೆ ಎಂಬುದು. ಈ ಅಂಶವನ್ನು ತ್ಯಾಗರಾಜರು **ಸದ್ಯೋಜಾತಾದಿ ಪಂಚವಕ್ತ್ರಜ ಸ ರಿ ಗ ಮ ಪ ದ ನೀ ... ... ...** ಎಂದು **ನಾದತನುಮನಿಶಂ** ಕೃತಿಯಲ್ಲಿ (ಚಿತ್ತರಂಜನಿರಾಗ) ಹೇಳಿದ್ದಾರೆ. ಅದೇ ಭಾವದ ಪುನರುಕ್ತಿ ಇಲ್ಲಿದೆ.

ಈಶ್ವರನು ಚಾರುಚರಿತ್ರ ಎಂದರೆ ಮನಸಿಗೆ ಮುದ ನೀಡುವಂಥ ಮನೋಹರವಾದ ಚರಿತ್ರೆಯುಳ್ಳವನು. **ತಪ್ತ ತ್ರಿಪುರ ಶಂಕರಂ** – ತ್ರಿಪುರಾಸುರರು ಮುಂಚೆ ಶಿವಭಕ್ತರೇ ಆಗಿದ್ದವರು, ನಂತರ ದುಷ್ಟರಾಗಿ ಶಿವನ ಶತ್ರುಗಳಾದರು. ಆದಾಗ್ಯೂ ಈಶ್ವರನು ತ್ರಿಪುರ ಸಂಹಾರಕ್ಕೆಂದು ಯುದ್ಧಕ್ಕೆ ಹೊರಟಾಗ ಸರ್ವಲಕ್ಷಣ ಸಂಪನ್ನನಾಗಿ ಬಂದು ಅವರಿಗೆ ದರ್ಶನ ನೀಡಿದ್ದೇ ಅಲ್ಲದೆ ತನ್ನ ಪಾಶುಪತಾಸ್ತ್ರದಿಂದ

ಅವರನ್ನು ಸಂಹರಿಸಿದನು ಎಂಬ ಕಥೆಯೊಂದುಂಟು. ಅಂತ್ಯದಲ್ಲಿ ತ್ರಿಪುರಾಸುರರು ಹೀಗೆ ಹೇಳಿದರಂತೆ. ಈಶ್ವರನೇ ನಮಗೆ ಈ ಜನ್ಮ ಸಾಕು. ಈ ಜನ್ಮದ ಕಡೆಯಲ್ಲಿ, ನಿನ್ನ ಶತ್ರುಗಳಾದ ನಾವು ಮುಂದಿನ ಜನ್ಮದಲ್ಲಿ ನಿನ್ನ ಭಕ್ತರಾಗುತ್ತೇವೆ ಎಂದರಂತೆ. ಇದರಿಂದಾಗಿ ಭಗವಂತನು ಸುಪ್ರೀತನಾದನಂತೆ. ಹೀಗೆ, ಭಗವಂತ ನೀಡುವ ಶಿಕ್ಷೆಯಿಂದಾಗಿ ಜೀವರು ಪಶ್ಚಾತ್ತಾಪಪಟ್ಟು ನೈತಿಕ ಜಾಗೃತಿಯಿಂದ ಎಚ್ಚೆತ್ತುಕೊಳ್ಳುತ್ತಾರೆಂಬುದಕ್ಕೆ ಈ ಪ್ರಸಂಗ ಒಂದು ನಿದರ್ಶನ.

ಈ ಕೃತಿಯು ಕರ್ನಾಟಕ ಕಾಪಿ ರಾಗದಲ್ಲಿ ಅಳವಟ್ಟಿದೆ. 22ನೇ ಮೇಳದಲ್ಲಿ ಜನ್ಯವಾದ ಕರ್ನಾಟಕ ಕಾಪಿಯು, ಹಿಂದೂಸ್ಥಾನೀ ಕಾಪಿ ರಾಗಕ್ಕಿಂತ ಬೇರೆಯಾದುದು. ಕರ್ನಾಟಕ ಕಾಪಿಯು ಉಪಾಂಗರಾಗ. ಇದರ ಆರೋಹಾವರೋಹಗಳು **ಸ ರಿ ಗಾ ಮ ಪ ದ ನಿ ಸ – ಸ ನಿ ದ ಪ ಮ ಗ ಮ ರಿ ಸ.** ಈ ರಾಗದಲ್ಲಿ ಮುತ್ತಯ್ಯಭಾಗವತರು **ಕೌಸುಂಬ ವಸನೋಪೇತೇ** ಎಂಬ ಇನ್ನೊಂದು ಕೃತಿಯನ್ನೂ ರಚಿಸಿದ್ದಾರೆ. ಶ್ಯಾಮಾಶಾಸ್ತ್ರಿಗಳ **ಅಖಿಲಾಂಡೇಶ್ವರಿ** ಎಂಬ ಕೃತಿಯೂ ಒಂದಿದೆ. ದಾಕ್ಷಿಣಾತ್ಯ ಸಂಗೀತಪದ್ಧತಿಯಲ್ಲಿ ಮುಂಚೆ ಹಲವು ರಚನೆಗಳು ಇದೇ ರಾಗದಲ್ಲೇ ರಚಿತವೆಂದಿದ್ದರೂ, ಸಮಕಾಲೀನವಾಗಿ ಅವು ಹಿಂದೂಸ್ಥಾನೀ ಕಾಪಿರಾಗದಲ್ಲಿ ಅನ್ಯ ಸ್ವರಗಳನ್ನು ಬಳಸಿಕೊಂಡು ಪ್ರಯೋಗವಾಗುತ್ತಿರುವುದುಂಟು.

ತ್ರಿಲೋಕೇಶಾಯ ನಮಃ

## 20. ಶ್ರೀತ್ರಿಲೋಕೇಶಂ ಚಿಂತಯಾಮಿಸತತಂ

**ರಾಗ – ಸಾವೇರಿ** **ಖಂಡಛಾಪುತಾಳ**

ಶ್ರೀ ತ್ರಿಲೋಕೇಶಂ ಚಿಂತಯಾಮಿ ಸತತಂ।
ಮಾತೃಭೂತಂ ವರಂ ಮಂಗಳಾಕಾರಂ
ಧಾತ್ರಾದಿ ಸುರನುತಂ ಸಕಲಸಂಪತ್ಪ್ರದಂ॥
ನಾದರೂಪಜಗನ್ನಾಥಂ ಸದಾಶಿವಂ
ವೇದವೇದ್ಯಂ ಮಹಾವಿಷ್ಣು ಪ್ರಿಯಕರಂ
ಆದಿದೇವಂ ಗಜಾಂಬರಂ ಹರಿಕೇಶಂ
ಮೋದಯ ಹೃದಯಂ ಹರಂ ಮುನಿಗಣವಂದಿತಂ॥

ತ್ರಿಲೋಕಗಳಿಗೂ ಒಡೆಯನಾದ ಶ್ರೀಮಾತೃಭೂತನನ್ನು ಸದಾಕಾಲ ಚಿಂತಿಸುತ್ತೇನೆ. ಈತ ಮಂಗಳಾಕಾರ, ಬ್ರಹ್ಮನೇ ಮೊದಲಾದ ದೇವತೆಗಳಿಂದ ಸ್ತುತಿಸಲ್ಪಟ್ಟವನು. ಸಕಲ ಸಂಪತ್ಪ್ರದನು, ಸದಾಶಿವನು, ವೇದವೇದ್ಯನು. ಮಹಾವಿಷ್ಣುವಿಗೂ ಪ್ರಿಯನಾದ ಈ ಆದಿದೇವನು ಆನಂದ ಹೃದಯನೂ, ಮುನಿವೃಂದದಿಂದಲೂ ವಂದಿಸಲ್ಪಡುವವನೂ ಆಗಿದ್ದಾನೆ. ಈಶ್ವರನು ನಾದರೂಪಿ ಎಂಬ ಅಂಶ ಮತ್ತೊಮ್ಮೆ ಇಲ್ಲಿ ಉಕ್ತಗೊಂಡಿದೆ. ಗಜಾಂಬರಂ ಪದವು ಆನೆಯ ಚರ್ಮವನ್ನು ವಸ್ತ್ರವನ್ನಾಗಿ ಉಳ್ಳವನೆಂದೂ, ವಿಸ್ತೃತವಾದ ಆಕಾಶದಲ್ಲಿರುವ ಆದಿದೇವನೆಂದೂ ಅರ್ಥೈಸಬಹುದಾಗಿದೆ.

ಶ್ರೀತ್ರಿಲೋಕೇಶಂ ಎಂಬ ಈ ಕೃತಿಯು ಪ್ರಸಿದ್ಧವಾದ ಸಾವೇರಿ ರಾಗದಲ್ಲಿ ಸಂಯೋಜಿತವಾಗಿದೆ. ಸಾವೇರಿಯು 15ನೇ ಮೇಳದಲ್ಲಿ ಜನ್ಯವಾದ ಔಡವ ಸಂಪೂರ್ಣ ಉಪಾಂಗರಾಗ. ರಾಗದ ಆರೋಹಾವರೋಹಗಳು **ಸ ರಿ ಮ ಪ ದ ಸ – ಸ ನಿ ದ ಪ ಮ ಗ ರಿ ಸ.** ಗೀತೆ, ವರ್ಣ, ಹಲವು ಕೃತಿಗಳು, ಪದ ಮುಂತಾದ ಹಲವು ವಿಧದ ರಚನೆಗಳನ್ನು ಹೊಂದಿರುವ ಈ ರಾಗವು ಭಕ್ತಿ ಮತ್ತು ಕರುಣ ರಸ ಪ್ರಧಾನ ರಾಗವಾಗಿದೆ. ಸಾರ್ವಕಾಲಿಕವಾದ ಈ ರಾಗದಲ್ಲಿನ ಕೆಲವು ರಚನೆಗಳೆಂದರೆ, ಕೊತ್ತವಾಸಲ್ ವೆಂಕಟರಾಮಯ್ಯನವರ **ಸರಸುಡ** ವರ್ಣ, ತ್ಯಾಗರಾಜರ **ರಾಮಬಾಣ, ತುಲಸೀಜಗಜ್ಜನನಿ,** ಶ್ಯಾಮಾಶಾಸ್ತ್ರಿಗಳ **ಶಂಕರಿ ಶಂಕುರು, ದುರುಸುಗಾ,** ಮುತ್ತುಸ್ವಾಮಿ ದೀಕ್ಷಿತರ **ಕರಿಕಲಭಮುಖಂ, ಶ್ರೀರಾಜಗೋಪಾಲ,** ಸ್ವಾತಿತಿರುನಾಳ್ ಮಹಾರಾಜರ **ಆಂಜನೇಯಂ, ದೇವಿಪಾವನೆ,** ಪಟ್ಣಂ ಸುಬ್ರಹ್ಮಣ್ಯ ಅಯ್ಯರರ **ಎಂತನೇರ್ಚಿನ,** ಮೈಸೂರು ಸದಾಶಿವರಾಯರ **ಶ್ರೀ ಕಾಮಕೋಟಿ** ಮುಂತಾದವು.

ಮುತ್ತಯ್ಯಭಾಗವತರ ಪ್ರಸ್ತುತ ಕೃತಿಯು ಶಿವಾಷ್ಟೋತ್ತರಶತದ 20ನೇ ನಾಮದಿಂದಲೇ ಆರಂಭವಾಗಿದೆ. ಚರಣದಲ್ಲಿ ನಾದ, ವೇದ, ಆದಿ, ಮೋದ ಎಂಬ ಪ್ರಾಸವಿದೆ. ಸುಂದರ ಚಿಟ್ಟೆಸ್ವರವೂ ಕೃತಿಗೆ ಸಂಯೋಜಿಸಲ್ಪಟ್ಟಿದೆ.

ಶಿತಿಕಂಠಾಯ ನಮಃ

## 21. ಹರಹರ ಶಿತಿಕಂಠಾಶಿವ

**ರಾಗ – ಫರಸ್** **ಆದಿತಾಳ**

**ಹರಹರ ಶಿತಿಕಂಠಾ ಶಿವ ಅನಾಥನಾಥ ಪಾಹಿಮಾಂ ವಿಭೋ।**
**ಸುರವರ ಪೂಜಿತ ಸುಂದರಾಕಾರ ಗಿರಿಜಾರಮಣ ಕೃಪಾಸಾಗರ॥**
**ಕಾಮದಹನ ಶಿವಕಾಮಿರಮಣ ಕಾಲಕಾಲ ಶ್ರೀಕಂಠ ನಿರ್ಗುಣ।**
**ಸರ್ವಲೋಕಜೀವ ದಯಾಕರ ಹರಶಂಕರ ಹರಿಕೇಶ ಸಚ್ಚಿದಾಕಾರ॥**

ಹರನೇ, ಶಿತಿಕಂಠನೇ, ಅನಾಥರಕ್ಷಕನೇ ನನ್ನನ್ನು ರಕ್ಷಿಸು ವಿಭುವೇ. ನೀನು ಕೃಪಾಸಾಗರನಾದ್ದರಿಂದ ಎಲ್ಲ ಲೋಕಗಳಲ್ಲೂ ಇರುವ ಜೀವಿಗಳೆಡೆ ದಯೆ ತೋರುವಾತ. ನೀನು ಗಿರಿಜೆ, ಶಿವಕಾಮಿಯರ ಪತಿ. ಸತ್ ಚಿತ್ ಆಕಾರನಾದ ನೀನು ನನ್ನನ್ನೂ ಕಾಪಾಡು ದಯಾಮಯನೇ ಎಂಬುದು ಕೃತಿಯ ಭಾವಾರ್ಥ.

ಸರ್ವಮಂಗಳೆಯಾದ ಶ್ರೀಪಾರ್ವತೀದೇವಿಗೂ ಪರಮೇಶ್ವರನಿಗಿರುವಂತೆಯೇ ಹಲವು ನಾಮಗಳುಂಟು. ಅವುಗಳಲ್ಲಿ ಶಿವಕಾಮಿ ಎಂಬುದೂ ಒಂದು. ಮುತ್ತಯ್ಯಭಾಗವತರು ತಮಿಳುನಾಡಿನ ಪ್ರಭಾವವನ್ನೂ ಹೊಂದಿದ್ದರಿಂದ, ಬಹುಶಃ ಆ ಪ್ರದೇಶಗಳಲ್ಲಿ ದೇವಿಗೆ ವಿಶೇಷವಾಗಿ ಪ್ರಚಲಿತವಿದ್ದ ಶಿವಕಾಮಿ ಎಂಬ ನಾಮವನ್ನು ಬಳಸಿರಬಹುದು. ಇದೇನೇ ಇದ್ದರೂ ಶ್ರೀಮಾತೆಯನ್ನು ಬೇರೆ ಬೇರೆ ಹೆಸರುಗಳಲ್ಲೂ ಸಂಬೋಧಿಸುವ ಪರಿಪಾಠ ನಮ್ಮಲ್ಲಿದೆ ಎಂಬುದು ಸರ್ವವಿದಿತ. ಅಂತೆಯೇ ಭಾಗವತರಿಲ್ಲಿ ಶ್ರೀಮಾತೆಯನ್ನು ಶಿವಗಾಮಿ ಎಂದು ಸಂಬೋಧಿಸಿದ್ದಾರೆ. ಪ್ರಾಪಂಚಿಕವಾಗಿ ಅದೆಷ್ಟೇ ಸುಖಸೌಖ್ಯಗಳಿದ್ದರೂ ಭಕ್ತ ವಾಗ್ಗೇಯಕಾರರಿಗೆ ಯಾವುದೋ ಒಂದು ಹಂತದಲ್ಲಿ ತಾವು ಅನಾಥರು, ಏಕಾಂಗಿಗಳು, ತಮ್ಮ ರಕ್ಷಕ ಸಚ್ಚಿದಾನಂದ ಸ್ವರೂಪನಾದ ದಯಾಮಯನೊಬ್ಬನಲ್ಲದೆ ಬೇರಿಲ್ಲ ಎಂಬ ಭಾವ ಮೂಡಿರುವಂತೆ ತೋರುತ್ತದೆ. ಅಂತೆಯೇ ಅವರು ದೇವರಲ್ಲಿ ಬಿನ್ನವಿಸುವಾಗ ತಮ್ಮ ಈ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ. ಈ ನಿಟ್ಟಿನಲ್ಲಿ ನೀಡಬಹುದಾದ ಒಂದೆರಡು ಉದಾಹರಣೆಗಳೆಂದರೆ,

1) **ಅನಾಥ ರಕ್ಷಕಿ ಶ್ರೀಕಾಮಾಕ್ಷಿ** (ತ್ಯಾಗರಾಜ ವಿರಚಿತ **ವಿನಾಯಕುನಿವಲೆ** ಮಧ್ಯಮಾವತಿ)
2) **ಅನಾಥ ರಕ್ಷಕಿ ಬೃಹನ್ನಾಯಕಿ** (ಜಯಚಾಮರಾಜ ಒಡೆಯರ್ ವಿರಚಿತ **ಶಂಕರಿ ಸದಾನಂದಲಹರಿ** – ಮಾಳವಿ)
3) **ಅನಾಥ ರಕ್ಷಕ ನೀವೇಗಾದಾ** (ವೀಣಾಕುಪ್ಪಯ್ಯರ್ ವಿರಚಿತ **ವಿನಾಯಕ ನಿನ್ನು ವಿನಾ** – ಹಂಸಧ್ವನಿ)

ಮೇಲೆ ನೀಡಿರುವ ಉದಾಹರಣೆಗಳಲ್ಲಿ ಮೊದಲಿನೆರಡು ದೇವೀಸ್ತುತಿಗಳು. ದೇವರು ಲಿಂಗಭೇದವಿಲ್ಲದ ಸರ್ವಶಕ್ತ ಎಂಬ ಅರ್ಥದಿಂದಷ್ಟೇ ಇಲ್ಲಿ ಉದಹರಿಸಲಾಗಿದೆ. ದೇವರು ಅನಾಥರೆಲ್ಲರಿಗೂ

ತಂದೆಯಾಗಿ, ತಾಯಿಯಾಗಿ, ಬಂಧುವಾಗಿ ಅನವರತ ರಕ್ಷಿಸುತ್ತಾನೆಂಬುದು ಎಲ್ಲ ಭಕ್ತರ ನಂಬುಗೆ. ಈ ಅರ್ಥದಿಂದಲೇ ಭಾಗವತರೂ ಇಲ್ಲಿ ಅನಾಥನಾಥ ಶಿವನನ್ನು ಸಂಬೋಧಿಸಿದ್ದಾರೆ.

ಹರಹರ ಶಿತಿಕಂಠ ಎಂದಾರಂಭವಾಗುವ ಈ ಕೃತಿಯನ್ನು ಮುತ್ತಯ್ಯಭಾಗವತರು ಫರಸ್ ರಾಗಕ್ಕೆ ಅಳವಡಿಸಿದ್ದಾರೆ. ಇದು 15ನೇ ಮೇಳದಲ್ಲಿ ಜನ್ಯವಾಗಿದೆ. ಆರೋಹ–ಅವರೋಹಗಳು **ಸ ರಿ ಗ ಮ ದಾ ನಿ ಸ – ಸ ನಿ ದ ಪ ಮ ಗ ರಿ ಸ.** ಅಥವಾ **ಸ ಗಾ ಮ ಪ ದ ನಿ ಸ – ಸ ನಿ ದ ಪ ಮ ಗಾ ರಿ ಸ.** ಕೆಲವೊಮ್ಮೆ ಆರೋಹದಲ್ಲಿ ರಿಷಭವೂ ಬಳಕೆ ಇದೆ ಎನ್ನುತ್ತಾರೆ. ಶ್ಯಾಮಾಶಾಸ್ತ್ರಿಗಳ **ತ್ರಿಲೋಕಮಾತಾನನ್ನು ಬ್ರೋವುಮು,** ಮುತ್ತುಸ್ವಾಮಿದೀಕ್ಷಿತರು ಶ್ರೀ ಶುಕ್ರಭಗವಂತಂ ಹಾಗೂ ರಾಂನಾಡ್ ಶ್ರೀನಿವಾಸ ಅಯ್ಯಂಗಾರ್ಯರ **ತನೋಂತನನ** ತಿಲ್ಲಾನಗಳು ಈ ರಾಗದ ಪ್ರಸಿದ್ಧ ರಚನೆಗಳಾಗಿವೆ. ಚಿಕ್ಕದಾದ ಚಿಟ್ಟೆಸ್ವರವೊಂದು ಕೃತಿಗೆ ಅಳವಡಿಕೆಯಾಗಿದೆ.

ಶಿವಾಪ್ರಿಯಾಯ ನಮಃ

## 22. ಶಿವಾಪ್ರಿಯಾ ಜಗದೀಶ

ರಾಗ – ಶ್ರೀರಂಜಿನಿ ರೂಪಕತಾಳ

**ಶಿವಪ್ರಿಯಾ ಜಗದೀಶ ಚಿದಾನಂದ ಚಿತ್ರಭೇಷ।**
**ಭವಭಯಹರ ಭಕ್ತಜನಪಾಲಕ ಮಾಂ ಪಾಹಿಪಾಹಿ॥**
**ಬಾಣ ರಾವಣ ಚಂಡೇಶಾದಿ ಭಕ್ತಪೂಜಿತ ಪರಮೇಶ್ವರ**
**ವಾಣೀಪತಿವಂದಿತ ವಾಮದೇವ ಹರಿಕೇಶ॥**

ಬಾಣ (ಬಲಿಚಕ್ರವರ್ತಿಯ ಪುತ್ರ), ರಾವಣ (ಲಂಕಾಧಿಪತಿಯಾಗಿದ್ದ ಶಿವಭಕ್ತ), ಚಂಡ ಅಥವಾ ಚಂಡಿಕೇಶ್ವರ ಮೊದಲಾದ ಭಕ್ತವೃಂದದಿಂದ, ವಾಣೀಪತಿಯಾದ ಬ್ರಹ್ಮನಿಂದ ಪೂಜಿಸಿ ವಂದಿಸಲ್ಪಟ್ಟ ಪರಮೇಶ್ವರನು ಶಿವೆಯ ಪ್ರಿಯನು. ಈತ ಜಗತ್ತಿಗೇ ಒಡೆಯನೂ, ಚಿದಾನಂದನೂ, ಚಿತ್ರಭೇಷನೂ, ಭವಭಯಹರನೂ ಆದವನು. ಭಕ್ತವೃಂದವನ್ನು ಪಾಲಿಸುವ ಪರಮೇಶ್ವರನಲ್ಲಿ ಮುತ್ತಯ್ಯಭಾಗವತರ ಪ್ರಾರ್ಥನೆಯು ತಮ್ಮನ್ನು ರಕ್ಷಿಸಬೇಕೆಂಬುದೇ ಆಗಿದೆ.

ಕೃತಿಯು ಸುಪ್ರಸಿದ್ಧವಾದ ಶ್ರೀರಂಜನಿರಾಗದಲ್ಲಿ ರೂಪಿತವಾಗಿದೆ. ಶ್ರೀರಂಜನಿಯು 22ನೇ ಮೇಳದಲ್ಲಿ ಜನ್ಯವಾದ ಷಾಡವರಾಗ, ಉಪಾಂಗರಾಗ. ಪಂಚಮವರ್ಜ್ಯವಾದ, ಸಾರ್ವಕಾಲಿಕವಾದ ಈ ರಾಗದಲ್ಲಿ ಹಲವು ರಚನೆಗಳುಂಟು. ರಾಗದ ಆರೋಹ ಅವರೋಹಗಳೆಂದರೆ **ಸ ರಿ ಗ ಮ ದ ನಿ ಸೆ – ಸ ನಿ ದ ಮ ಗ ರಿ ಸ.**

ತ್ಯಾಗರಾಜರಿಂದ ವಿಶೇಷವಾಗಿ ಪ್ರಚಾರಕ್ಕೆ ಬಂದ ರಾಗಗಳಲ್ಲಿ ಇದೊಂದು ಎನ್ನುವುದುಂಟು. ಆದರೆ ತ್ರಿಮೂರ್ತಿಗಳಿಗೂ ಮೊದಲಿದ್ದ ರಾಮಸ್ವಾಮಿದೀಕ್ಷಿತರು ಈ ರಾಗದಲ್ಲಿ ಚೌಕವರ್ಣ **ಸಾಮಿನಿನ್ನೇ** ಎಂಬುದನ್ನು ಆದಿತಾಳದಲ್ಲಿ ರಚಿಸಿದ್ದಾರೆ. ಈ ವರ್ಣದ ವಿಶೇಷವೆಂದರೆ ವರ್ಣದ ಎತ್ತುಗಡೆ ಸ್ವರಗಳಲ್ಲಿ ಒಂದನ್ನು ರಾಮಸ್ವಾಮಿದೀಕ್ಷಿತರೂ, ಇನ್ನೊಂದನ್ನು ಶ್ಯಾಮಶಾಸ್ತ್ರಿಗಳೂ, ಮತ್ತೊಂದನ್ನು ಮುತ್ತುಸ್ವಾಮಿದೀಕ್ಷಿತರೂ ರಚಿಸಿದಂತೆ ಪ್ರತೀತಿಯುಂಟು. ಈ ಅಭಿಪ್ರಾಯಕ್ಕೆ ಸುಬ್ಬರಾಮದೀಕ್ಷಿತರ ಸಂಗೀತಸಂಪ್ರದಾಯಪ್ರದರ್ಶಿನಿ ಗ್ರಂಥವೇ ಆಧಾರ. ಮೂರ್ಛನಾಕಾರಕ ಜನ್ಯರಾಗವಾದ ಇದು ಸಾರ್ವಕಾಲಿಕವೂ, ಬೇರೆ ಬೇರೆ ಕಾಲಪ್ರಮಾಣಗಳಲ್ಲೂ ಪ್ರಯೋಗಿಸಲನುವಾಗುವ ರಾಗವೂ ಹೌದು. ಈ ರಾಗದಲ್ಲಿರುವ ಕೆಲವು ರಚನೆಗಳೆಂದರೆ, ರಾಮಸ್ವಾಮಿದೀಕ್ಷಿತರ **ಸಾಮಿನಿನ್ನೇ** ವರ್ಣ, ತ್ಯಾಗರಾಜರ **ಮಾರುಬಲ್ಕಕುನ್ನಾವೇಮಿ, ಸೊಗಸುಗಾ ಮೃದಂಗತಾಳಮು, ಸರಿಯೆವ್ವರೇ,** ಮುತ್ತುಸ್ವಾಮಿದೀಕ್ಷಿತರ ಶ್ರೀದುಂದುರ್ಗೇ ಮುಂತಾದವು.

ಕೃತಿ ಶಿವಾಷ್ಟೋತ್ತರಶತದಲ್ಲಿನ 22ನೇ ನಾಮದಿಂದಲೇ ಆರಂಭವಾಗಿದೆ. ಚರಣದಲ್ಲಿ ಬಾಣ, ವಾಣಿ ಎಂಬ ಪ್ರಾಸವಿದೆ. ಸುಂದರವಾದ ಚಿಟ್ಟೆಸ್ವರವೂ ಕೃತಿಗೆ ಅಳವಟ್ಟಿದೆ.

ಉಗ್ರಾಯನಮಃ

## 23. ಪಶುಪತಿಂ ಉಗ್ರಂ ಕಪಾಲಿನಂ ವಂದೇ

ರಾಗ – ಆರಭಿ　　　　　　　　　　　　　　　　　　ಖಂಡಛಾಪುತಾಳ

ಪಶುಪತಿಂ ಉಗ್ರಂ ಕಪಾಲಿನಂ ವಂದೇ॥
ಶಶಿಧರಂ ಸಾಂಬಂ ಶ್ರೀಶಂಕರಂ ಶಾಶ್ವತಂ।
ಷಣ್ಮುಖಪ್ರಿಯ ತಾತಂ ಸರ್ವಂ ಸಭಾಪತಿಂ॥
ಕಲ್ಯಾಣಸುಂದರಂ ಕಂದರ್ಪಸುಂದರಂ
ಕರ್ಪೂರಸುಂದರಂ ಕದಂಬವನ ಸುಂದರಂ
ಮಲ್ಲಿಕಾರ್ಜುನಪತಿಂ ವನಮಾಲಿ ಪ್ರಿಯಕರಂ
ಮಂಗಳಾಕಾರಂ ಮಹೇಶಂ ಹರಿಕೇಶಂ॥

ದುಷ್ಟಶಿಕ್ಷಕನೂ ಶಿಷ್ಟರಕ್ಷಕನೂ ಆದ ಶಿವನಿಗೆ ಎರಡು ಶರೀರಗಳು. ಒಂದು, ದುಷ್ಟ ಶಿಕ್ಷಣಾರ್ಥವಾದ ಉಗ್ರರೂಪ. ಮತ್ತೊಂದು ಶಿಷ್ಟ ಪರಿಪಾಲನೆಗಾಗಿರುವ ಮಂಗಳಕರವಾದ ಸೌಮ್ಯರೂಪ. ಅತ್ಯಂತ ಶ್ರೇಷ್ಠವಾದ ಮಂತ್ರವೆಂದೂ, ಉಪನಿಷತ್ತೆಂದೂ ಪ್ರಸಿದ್ಧವಾಗಿದೆ ರುದ್ರಾಧ್ಯಾಯ. ಇದರಲ್ಲಿ ನಮ್ಮ ಬಗೆಗೆ ಶಾಂತವಾಗಿರುವುದಕ್ಕಾಗಿ ಈಶ್ವರನ ಘೋರರೂಪವನ್ನೂ, ಅಂತೆಯೇ ಇಹ–ಪರದ ಸೌಖ್ಯಕ್ಕಾಗಿ ಶಾಂತರೂಪವನ್ನೂ ಪ್ರಾರ್ಥಿಸಲಾಗಿದೆ. ಶಿವನನ್ನು ವರ್ಣಿಸಿರುವ ಮಂತ್ರಗಳಲ್ಲಿ ಕೆಲವು ಪ್ರಾರ್ಥನಾ ಮಂತ್ರಗಳೂ, ಕೆಲವು ನಮಸ್ಕಾರಮಂತ್ರಗಳೂ ಇವೆ. ಈ ಸಾಲಿನ ಒಂದು ಮಂತ್ರ ಹೀಗಿದೆ.

ನಮಸ್ತೇ ರುದ್ರಮನ್ಯವ ಉತೋತ ಇಷವೇ ನಮಃ।
ನಮಸ್ತೇ ಅಸ್ತು ಧನ್ವನೇ ಬಾಹುಭ್ಯಾಮುತತೇ ನಮಃ।

ಇದರ ಭಾವವು ಹೀಗಿದೆ. ದುಷ್ಟರನ್ನು ರೋದಿಸುವಂತೆ ಮಾಡುವ ರುದ್ರದೇವನೇ, ನಿನ್ನ ಕೋಪಕ್ಕೂ, ನಿನ್ನ ಬಿಲ್ಲು ಬಾಣಗಳಿಗೂ, ಬಾಹುಗಳಿಗೂ ನಮಸ್ಕಾರ. ನೀನೂ ನಿನ್ನ ಆಯುಧಗಳೂ ನಮ್ಮ ವಿಷಯದಲ್ಲಿ ಶಾಂತವಾಗಿದ್ದು ನಮ್ಮನ್ನು ಸುಖಪಡಿಸು.

ಹೀಗೆಯೇ ಮುತ್ತಯ್ಯಭಾಗವತರಿಲ್ಲಿ ಉಗ್ರನಾದ ಪಶುಪತಿ–ಕಪಾಲಿಗೆ ವಂದಿಸಿದ್ದಾರೆ. ಷಣ್ಮುಖನ ಪ್ರೀತಿಯ ತಂದೆಯಾದ, ವನಮಾಲಿ ಪ್ರಿಯಕರನಾದ, ಮಂಗಳಾಕಾರನಿಗೆ ವಂದಿಸುವ ಮೂಲಕ ಅವರು ಈಶ್ವರನನ್ನು ಶಾಂತಪಡಿಸಿದ್ದಾರೆ.

ಇಲ್ಲಿ ಪ್ರಯೋಗವಾಗಿರುವ ಮಲ್ಲಿಕಾರ್ಜುನ ಪತಿಂ ಎಂಬ ಬಗೆಗೆ ವಿಶೇಷವೊಂದುಂಟು. ಆಂಧ್ರರಾಜ್ಯದ ಕೃಷ್ಣಾಜಿಲ್ಲೆಯ ಕೃಷ್ಣಾನದೀತೀರದಲ್ಲಿ ಶ್ರೀಶೈಲ ಕ್ಷೇತ್ರವಿದೆ. ಇದು ಪ್ರಸಿದ್ಧವಾದ ಶಿವಕ್ಷೇತ್ರಗಳಲ್ಲಿ

ಒಂದು. ಇಲ್ಲಿ ಮಲ್ಲಿಕಾರ್ಜುನ ಜ್ಯೋತಿರ್ಲಿಂಗವಿದ್ದು ಈ ಸ್ಥಳ ದಕ್ಷಿಣ ಕೈಲಾಸ ಎನಿಸಿದೆ. ಇದು 51 ಶಕ್ತಿಪೀಠಗಳಲ್ಲೊಂದು. ಕೋಪಗೊಂಡ ಕಾರ್ತಿಕೇಯನು ಕ್ರೌಂಚ ಪರ್ವತಕ್ಕೆ ಹೊರಟುಹೋದನೆಂದೂ, ಆತನನ್ನು ಸಮಾಧಾನಿಸುವ ಸಲುವಾಗಿ ಈಶ್ವರನು ಅಲ್ಲಿಗೇ ಬಂದು ಜ್ಯೋತಿರ್ಲಿಂಗವಾಗಿ ಉದ್ಭವಿಸಿ ಮಲ್ಲಿಕಾರ್ಜುನನೆನಿಸಿದಂತೆ ಹೇಳುತ್ತಾರೆ. ಇಂಥ ಕ್ಷೇತ್ರದ ಒಡೆಯನಾದವನೆಂದು ಮುತ್ತಯ್ಯಭಾಗವತರಿಲ್ಲಿ ಮಲ್ಲಿಕಾರ್ಜುನ ಪತಿಂ ಎಂಬುದಾಗಿ ಬಳಸಿದ್ದಾರೆ.

ಪಶುಪತಿಂ ಉಗ್ರಂ ಕೃತಿಯು ಪ್ರಸಿದ್ಧವಾದ ಆರಭಿ ರಾಗದಲ್ಲಿದೆ. ಆರಭಿಯು ಪ್ರಥಮಗುಂಪಿನ ಘನರಾಗ ಪಂಚಕಗಳಲ್ಲಿ ಒಂದು. ಈ ಗುಂಪಿನ ಉಳಿದ ನಾಲ್ಕು ರಾಗಗಳು ನಾಟ, ಗೌಳ, ವರಾಳಿ ಮತ್ತು ಶ್ರೀ ರಾಗಗಳು. ಆರಭಿ ರಾಗವು 29ನೇ ಮೇಳದಲ್ಲಿ ಜನ್ಯವಾದ ಔಡವ ಸಂಪೂರ್ಣ ಉಪಾಂಗರಾಗ. ಆರೋಹಾವರೋಹಗಳು **ಸ ರಿ ಮ ಪ ದ ಸೆ – ಸೆ ನಿ ದ ಪ ಮ ಗ ರೀ ಸ.** ನಿಷಾದ ಗಾಂಧಾರಗಳು ಈ ರಾಗದಲ್ಲಿ ಅಲ್ಪಪ್ರಯೋಗವುಳ್ಳದ್ದು. ಜಂಟಿಸ್ವರ ಪ್ರಯೋಗಗಳು ವಿಶೇಷ ರಂಜನೆ ನೀಡುತ್ತವೆ. ಈ ಜಂಟಿಸ್ವರದ ಅಳವಡಿಕೆಯನ್ನು ಪ್ರಸ್ತುತ ಕೃತಿಯ ಚಿಟ್ಟೆಸ್ವರದಲ್ಲೂ ಕಾಣಬಹುದು. ತ್ರಿಸ್ಥಾಯಿಯಲ್ಲೂ ವ್ಯಾಪ್ತಿಯುಳ್ಳ ಸಾರ್ವಕಾಲಿಕವಾದ ಈ ರಾಗ ಮಧ್ಯಲಯಕ್ಕೆ ವಿಶೇಷವಾಗಿ ಹೊಂದುತ್ತದೆ. ಭಕ್ತಿ, ವೀರ, ಅದ್ಭುತ ರಸಗಳನ್ನು ಅಭಿವ್ಯಕ್ತಿಸಲು ಬಳಸುವ ರಾಗವಿದು. ಬಹುತೇಕ ರಚನಕಾರರು ಈ ರಾಗದಲ್ಲಿ ಗೇಯರಚನೆಗಳನ್ನು ಸೃಷ್ಟಿಸಿದ್ದಾರೆ. ಈ ರಾಗದಲ್ಲಿರುವ ತ್ಯಾಗರಾಜವಿರಚಿತ **ಸಾಧಿಂಚೆನೇ** ಕೃತಿಯು ದೀರ್ಘವೂ, ತಾನವರ್ಣದ ಮಾದರಿಯಲ್ಲಿ ರಚಿತವಾಗಿರುವುದೂ ಆಗಿದೆ.

ಕಪಾಲಿನೇ ನಮಃ

## 24. ಕಾಪಾಲಿನಂ ವಂದೇ

**ರಾಗ – ಹಿಂದೂಸ್ತಾನೀ ಕಾಪಿ** **ಮಿಶ್ರಛಾಪುತಾಳ**

**ಕಾಪಾಲಿನಂ ವಂದೇ ಕರಿಚರ್ಮಾಂಬರಧರಂ।**
**ಕೃಪಾನಿಧಿಂ ಈಶಂ ಕಿನ್ನರಾದಿಸೇವಿತಂ।**
**ನಾಗಭೂಷಣಂ ರಾಜಧರಂ ಶಿವಂ**
**ವಾಗೀಶಾದಿ ವಂದಿತಪದಂ**
**ಯೋಗಮೂಲಂ ಯುವಾನನಂ**
**ಯೋಗಪ್ರದಂ ಹರಿಕೇಶಂ॥**

ಕರಿಚರ್ಮಾಂಬರನಾದ, ಕೃಪಾನಿಧಿ ಕಾಪಾಲಿಗೆ ನಮಸ್ಕಾರಗಳು. ಈತ ಕಿನ್ನರಾದಿ ಸೇವಿತನೂ, ನಾಗಭೂಷಣನೂ, ಬ್ರಹ್ಮನೇ ಮೊದಲಾದ ದೇವತೆಗಳಿಂದ ವಂದಿಸಲ್ಪಟ್ಟವನೂ ಆದವನು. ಮುತ್ತಯ್ಯಭಾಗವತರು ಇಂಥ ಈಶ್ವರನನ್ನು ಯೋಗಮೂಲಂ, ಯುವಾನನಂ ಮತ್ತು ಯೋಗಪ್ರದಂ ಎಂದು ಸಂಬೋಧಿಸುತ್ತಾರೆ. ಯುಗಯುಗಗಳಲ್ಲಿಯೂ ಶಿವನು ಯೋಗಾಚಾರ್ಯನಾಗಿ ಯೋಗಪರಂಪರೆಯನ್ನು ಸ್ಥಾಪಿಸುತ್ತಾನೆ ಎಂದು ಶಿವಪುರಾಣೋಕ್ತವಾದ ಶ್ಲೋಕ ಹೇಳುತ್ತದೆ (**ಯುಗಾವರ್ತೇನ ಶಿಶ್ನೇಷು** ........). ಆದುದರಿಂದ ಜಗತ್ತಿನಲ್ಲಿ ಯೋಗಪ್ರವರ್ತಕ ಶಿವನೇ ಎಂಬುದು ವಿವಾದರಹಿತ ವಿಷಯ. ಇಲ್ಲಿ ಬಳಸಲಾಗಿರುವ ಯೋಗ ಪದವನ್ನು ಬೇರೆ ಬೇರೆ ರೀತಿಯಲ್ಲೂ ಅರ್ಥೈಸಬಹುದು.

1) ಇಂದ್ರಿಯನಿಗ್ರಹ
2) ಧ್ಯಾನಕ್ಕೆ ಕುಳಿತುಕೊಳ್ಳುವ ವಿಶೇಷವಾದ ಒಂದು ಭಂಗಿ
3) ಆಚಾರ್ಯ ಶಂಕರರ ಪ್ರಕಾರ ಯೋಗ ಎಂದರೆ ಇಲ್ಲದ ವಸ್ತುವನ್ನು, ಅದು ಲೌಕಿಕವಿರಲಿ ಅಥವಾ ಅಧ್ಯಾತ್ಮಿಕವಿರಲಿ, ಅದನ್ನು ಪಡೆಯುವುದು.

ಈ ಅರ್ಥದಲ್ಲಿ ಇಂದ್ರಿಯನಿಗ್ರಹಕ್ಕೆ ಆದರ್ಶನಾದವನು ಈಶ್ವರ. ಈತ ಧ್ಯಾನ ಸ್ಥಿತಿಯಲ್ಲಿದ್ದಾನೆ. ಹೀಗಾಗಿ ಈತ ಯೋಗಮೂಲನೇ ಹೌದು. ಇನ್ನು ಯೋಗಪ್ರದಂ ಎಂದರೆ ಭಕ್ತರಿಗೆ ಅವರಲ್ಲಿಲ್ಲದುದನ್ನು ನೀಡುವಾತನೂ ಆಗಿದ್ದಾನೆ ಎಂಬ ಅರ್ಥಗಳು ಸಮಂಜಸ ಎನ್ನಬಹುದು. ಇನ್ನು ಯುವ ಎಂದರೆ ಸರ್ವದಾ ಅಜರಾಮರ ಎಂಬ ಅರ್ಥವೂ ಇದೆ. ಇಂತಹ ಸುಮುಖಿ ಶಿವ ಯುವಾನನನಾಗಿದ್ದಾನೆ.

ಕಾಪಾಲಿನಂ ವಂದೇ ಎಂದಾರಂಭವಾಗುವ ಈ ಕೃತಿಯು ಹಿಂದೂಸ್ಥಾನೀ ಕಾಪಿ ರಾಗದಲ್ಲಿದೆ. ಪ್ರಾಚೀನವಾದ ಕರ್ನಾಟಕ ಕಾಪಿರಾಗಕ್ಕಿಂತ ವಿಭಿನ್ನವಾದ ಈ ರಾಗವು ಭಾಷಾಂಗರಾಗ. ಆದರೆ, ಈ ರಾಗಕ್ಕೆ

ಜನಕಮೇಳ ಯಾವುದೆಂದು ನಿರ್ಣಯಿಸುವುದು ಸ್ವಲ್ಪ ಕಷ್ಟವೇ. ಏಕೆಂದರೆ ಶುದ್ಧರಿಷಭ, ಪ್ರತಿಮಧ್ಯಮಗಳ ವಿನಾ ಮಿಕ್ಕೆಲ್ಲ ಸ್ವರವಿಭೇದಗಳೂ ಈ ರಾಗದಲ್ಲಿ ಪ್ರಯೋಗಗೊಳ್ಳುತ್ತವೆ. **ರಿಮಪನಿ** ಸಂಚಾರದಲ್ಲಿ ನಿಷಾದವನ್ನು ನ್ಯಾಸಮಾಡುವಾಗ ಒಮ್ಮೆ ಕೈಶಿಕಿ ನಿಷಾದವೂ ಇನ್ನೊಮ್ಮೆ ಕಾಕಲಿ ನಿಷಾದವೂ ಬರಬಹುದು. **ಪನಿಸ** ಪ್ರಯೋಗದಲ್ಲಿ ಕಾಕಲಿ ನಿಷಾದ ಪ್ರಯೋಗವಾಗುತ್ತದೆ. **ಮಗಮ** ಸಂಚಾರದಲ್ಲಿ ಅಂತರ ಗಾಂಧಾರ, **ನಿದನಿ, ನಿದಪಮಗರಿ** ಸಂಚಾರದಲ್ಲಿ ಚತುಶ್ರುತಿದೈವತ, **ರೀಗಮಗರಿ** ಸಂಚಾರದಲ್ಲಿ ಎರಡೂ ಸಾಧಾರಣ ಗಾಂಧಾರವಾಗಿ **ಸ ರಿ ಗ ಮ ಗ ಮ** ಸಂಚಾರದಲ್ಲಿ ಅಂತರ ಗಾಂಧಾರ ಪ್ರಯೋಗಗೊಳ್ಳುತ್ತದೆ. ಹೀಗಾಗಿ ಈ ರಾಗದ ಜನಕರಾಗವನ್ನು ಖಚಿತವಾಗಿ ನಿರ್ಧರಿಸುವುದು ಕಷ್ಟವಾಗುತ್ತದೆ.

ಇಂದು ಈ ರಾಗದಲ್ಲಿ ಪ್ರಯೋಗವಾಗುತ್ತಿರುವ ಪ್ರಸಿದ್ಧ ರಚನೆಗಳೆಂದರೆ ತ್ಯಾಗರಾಜರ **ಅನ್ಯಾಯಮುಸೇಯಕುರಾ, ಇಂತಸೌಖ್ಯಮನಿಚೆಪ್ಪಜಾಲ, ಮೀವಲ್ಲ ಗುಣದೋಷಮೇಮಿ,** ವಾಸುದೇವಾಚಾರ್ಯರ **ಕಲಯೇ ಮಮಹೃದಯೇ, ಗೋವಿಂದಂ ಭಜರೇ, ಭಜ ಮಾಧವಂ,** ರಾಂನಾಡು ಶ್ರೀನಿವಾಸ ಅಯ್ಯಂಗಾರ್ಯರ **ಸರಸಮುಲಾಡೇದೆಂದುಕು** ಮುಂತಾದವು. ಇವುಗಳೊಂದಿಗೆ ಪುರಂದರರ **ಜಗದೋದ್ಧಾರನ** ದೇವರನಾಮ ಅತ್ಯಂತ ಜನಪ್ರಿಯ ರಚನೆಯಾಗಿದೆ.

ರಾಗದ ಅರೋಹಾವರೋಹಗಳು **ಸ ರಿ ಮ ಪ ನಿ ಸ̇ – ಸ̇ ನಿ ದ ನಿ ಪ ಮ ಗ ರಿ ಸ.** ಕೃತಿಯು ಕಾಪಾಲಿನಂ ಎಂದೇ ಆರಂಭವಾಗಿದೆ. ಚಿಟ್ಟೆಸ್ವರವೂ ಕೃತಿಗೆ ಅಳವಟ್ಟಿದೆ.

ಕಾಮಾರಯೇ ನಮಃ

## 25. ಕಾಮಾರಿಂ ಭಜಮಾನಸ ಸತತಂ

ರಾಗ – ದರ್ಬಾರ್ ಆದಿತಾಳ

**ಕಾಮಾರಿಂ ಭಜಮಾನಸ ಸತತಂ।**
**ಸಾಮಜ ಚರ್ಮಧಾರಿಣಂ ಸುಗುಣಂ**
**ಸಕಲಸಂಪತ್ಪ್ರದಂ ಸಗುಣಂ ನಿರ್ಗುಣಂ॥**
**ನಾರದಗೀತಂ ನಾರಾಯಣಪ್ರಿಯಂ**
**ನಾನಾವಿಧ ನಾಮರೂಪಾತ್ಮಕಂ**
**ಕಾರಣ ಕಾರ್ಯಾತೀತಂ ಮಹೇಶಂ**
**ಕಾಂಚನ ವಾಸಸಂ ಶ್ರೀಹರಿಕೇಶಂ॥**

ಎಲೈ ಮನಸ್ಸೇ, ಕಾಮಾರಿಯನ್ನು ಸತತವೂ ಭಜಿಸು. ಗಜಚರ್ಮಾಂಬರಧಾರಿಯಾದ ಮಹೇಶನು ಸತ್ವಗುಣಸಂಪನ್ನನೂ, ನಿರ್ಗುಣನೂ, ಸಕಲ ಸಂಪತ್ಪ್ರದನೂ ಆಗಿದ್ದಾನೆ. ಈತ ನಾರದಗೀತನೂ, ನಾರಾಯಣಪ್ರಿಯನೂ, ಅನೇಕ ನಾಮರೂಪಗಳನ್ನುಳ್ಳವನೂ, ಕಾರ್ಯಕಾರಣಗಳಿಗೆ ಅತೀತನಾದವನೂ ಅರ್ಥಾತ್ ನಿಲುಕದವನೂ ಆಗಿದ್ದಾನೆ ಎನ್ನುತ್ತಾ ಮುತ್ತಯ್ಯಭಾಗವತರು ಪ್ರಸ್ತುತ ಕೃತಿಯಲ್ಲಿ ಮನಸ್ಸಂಬೋಧನೆ ಮಾಡಿಕೊಂಡಿದ್ದಾರೆ. ಇಂತಹ ಮನಸ್ಸಂಬೋಧನೆಯ ಹತ್ತುಹಲವು ಕೃತಿಗಳು ವಾಗ್ಗೇಯ ಕೃತಿಭಂಡಾರದಲ್ಲಿ ಕಾಣಬರುತ್ತವೆ.

ಪುರಾಣಗಳಲ್ಲಿನಂತೆ ಪರಮೇಶ್ವರನು ಭಕ್ತರಿಗಾಗಿ ಸ್ವಇಚ್ಛೆಯಿಂದ ಅನಂತ ನಾಮರೂಪಗಳನ್ನು ತಳೆಯುತ್ತಾನಾದರೂ ಆತ ಅವೆಲ್ಲವನ್ನೂ ಮೀರಿದವನು. ಜಗತ್ತಿನ ಎಲ್ಲ ವಿಕಾರಗುಣಗಳನ್ನು ತನ್ನಲ್ಲಿ ಲೀನವಾಗಿಸಿಕೊಂಡು ಶುದ್ಧ ಚೈತನ್ಯವಾಗಿ ಬೆಳಗುವ ಮೂರ್ತಿ, ದೇವರು.

ಮುತ್ತಯ್ಯಭಾಗವತರು ಶ್ರೀಕಂಠೇಶ್ವರನನ್ನು **'ಸಕಲಸಂಪತ್ಪ್ರದನಾದರೂ ಸಗುಣ ನಿರ್ಗುಣ'**ನೆಂದು ಹೇಳುವಲ್ಲಿ ವೇದಾಂತದ ಅರ್ಥವೊಂದುಂಟು. ಈಶ್ವರನು ನಮ್ಮ ಮನೋವಾಕ್ಕುಗಳಿಗೆ ಅಗ್ರಾಹ್ಯನು. ಏಕೆಂದರೆ ನಮ್ಮ ಮಾತು ಮನಸ್ಸುಗಳು ಗುಣವಿರುವ ವಸ್ತುಗಳನ್ನು ಮಾತ್ರ ಗ್ರಹಿಸಬಲ್ಲವು. ದೇವರಾದರೋ ನಮ್ಮ ಮಾತು ಮನಸ್ಸುಗಳಿಗೆ ನಿಲುಕದಷ್ಟು ಕಲ್ಯಾಣಗುಣಗಳನ್ನು ಹೊಂದಿದವನು. ಇಲ್ಲೊಂದು ವಿಶೇಷವುಂಟು. ಗುಣ–ಗುಣಿ ಸಂಬಂಧ. ಗುಣ ಎಂದರೆ ಜಡ ಮತ್ತು ಚೇತನಗಳನ್ನೊಳಗೊಂಡ ಪ್ರಪಂಚ. ಗುಣಿ ಎಂದರೆ ದೇವರು. ಗುಣ–ಗುಣಿ ಎಂಬ ಈ ಸಂಬಂಧದಲ್ಲಿ ಗುಣಿಯೇ ಮುಖ್ಯವೇ ಹೊರತು ಗುಣವಲ್ಲ. ಏಕೆಂದರೆ ಗುಣಿಯಿಲ್ಲದೆ ಗುಣವಿರಲು ಸಾಧ್ಯವೇ ಇಲ್ಲ. ಈ ಹಿನ್ನೆಲೆಯಲ್ಲಿ ಮುತ್ತಯ್ಯಭಾಗವತರ ಮೇಲಿನ ಸಾಲನ್ನು ಅರ್ಥೈಸಬಹುದು.

ಕಾಮಾರಿಂ ಭಜಮಾನಸ ಎಂದಾರಂಭವಾಗಿರುವ ಈ ಕೃತಿ ದರ್ಬಾರ್ ರಾಗದಲ್ಲಿದೆ. ದರ್ಬಾರ್ ರಾಗವು 22ನೇ ಮೇಳದಲ್ಲಿ ಜನ್ಯವಾದ ರಾಗ, ಉಪಾಂಗರಾಗ. ರಾಗದ ಆರೋಹಣ–ಅವರೋಹಣಗಳು **ಸ ರಿ ಮ ಪ ದ ನಿ ಸ – ಸ ನೀ ದ ಪ ಮ ರಿ ಗಾ ಗಾ ರಿ ಸ – ಗಗ್ಗಾರಿಸ, ನಿನ್ನೀದಪ, ರಿಮಪದನಿಸಪಾ, ದನಿಪಮರೀ** ಸಂಚಾರಗಳು ಪದೇ ಪದೇ ಬಳಸುವುದರಿಂದ ರಾಗಚ್ಛಾಯೆ ವಿಶೇಷವಾಗಿ ಸ್ಫುರಿಸುತ್ತದೆ. ಪ್ರಸಿದ್ಧವಾದ ಕೆಲವು ರಚನೆಗಳೆಂದರೆ, ತ್ಯಾಗರಾಜಕೃತವಾದ **ಯೋಚನ ಕಮಲಲೋಚನ, ಮುಂದುವೆನುಕ, ಎಂದುಂಡಿವೆಡಲಿತಿವೋ,** ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ ಕೃತ **ಚಲಮೇಲ** ವರ್ಣ ಮುಂತಾದವು.

ಶಿವಾಷ್ಟೋತ್ತರಶತದಲ್ಲಿನ 25ನೇ ನಾಮ ಕಾಮಾರಿ ಎಂಬುದು. ಪ್ರಸ್ತುತ ಮುತ್ತಯ್ಯಭಾಗವತರ ಕೃತಿಯು ಪರಮೇಶ್ವರನ ಅದೇ ನಾಮದಿಂದಲೇ ಆರಂಭವಾಗಿದೆ. ಐದು ಸ್ವರಗಳ **ರಿಮಪದನಿ–ಮಪದನಿಸ** ಜೋಡಣೆ ಚಿಟ್ಟೆಸ್ವರದಲ್ಲಿದ್ದು, ಚಿಟ್ಟೆಸ್ವರ ರಾಗಭಾವಪೂರ್ಣವಾಗಿದೆ.

ಅಂಧಕಾಸುರಸೂದನಾಯ ನಮಃ

## 26. ಅಂಧಕಾಸುರಸೂದನ ಅಗ್ನಿಲೋಚನ

**ರಾಗ – ಶಹನ** **ರೂಪಕತಾಳ**

**ಅಂಧಕಾಸುರಸೂದನ ಅಗ್ನಿಲೋಚನ।**
**ಬಂಧಪಾಪಮೋಚನ ಬಿಲ್ವಮಾಲಾ ಭೂಷಣ।**
**ನೀಲಕಂದರ ಕರುಣಾಕರ ನಿರಂತರ ಮಾಂಪಾಲಯ॥**
**ಶ್ರೀಹರಿ ವಿಧಿಮುಖಸೇವಿತ ಚಿನ್ಮಯ ಸಚ್ಚಿದಾನಂದ।**
**ಮೋಹರಹಿತ ಮುನಿಸೇವಿತ ಮೂಷಿಕವಾಹನ ಪೂಜಿತ।**
**ಶ್ರೀಹರಹರ ಶಂಕರ ಶಿವಕಾಮೀಮನೋಹರ**
**ಶ್ರೀಹರಿಕೇಶ ಚಿತ್ಸಭೇಷ ಈಶ॥**

ಕಶ್ಯಪನ ಸುತನಾದ ಅಂಧಕಾಸುರನನ್ನು ಸಂಹರಿಸಿದ, ಅಗ್ನಿಲೋಚನನಾದ, ಪಾಪವಿಮೋಚಕನಾದ, ಕರುಣಾಕರನಲ್ಲಿ ಮುತ್ತಯ್ಯಭಾಗವತರು ನಿರಂತರವಾಗಿ ತಮ್ಮನ್ನು ಪಾಲಿಸುವಂತೆ ಪ್ರಾರ್ಥಿಸಿದ್ದಾರೆ. ಬ್ರಹ್ಮ, ವಿಷ್ಣುಗಳಿಂದ ಸೇವಿತನಾದ, ಮೋಹರಹಿತನೂ, ಮುನಿಗಣಸೇವಿತನೂ, ಗಣಪತಿಯಿಂದ ಪೂಜಿಸಲ್ಪಟ್ಟ ಚಿನ್ಮಯ ಸಚ್ಚಿದಾನಂದ ಶಂಕರ ಶಿವಕಾಮೀಮನೋಹರನೂ ಆದ ಶಿವನಲ್ಲಿ, ಇದು ಅವರ ಬೇಡಿಕೆಯಾಗಿದೆ. ನಾಮ ಸಂಕೀರ್ತನೆಯ ರೂಪದಲ್ಲೇ ಸಾಹಿತ್ಯವಿದ್ದರೂ ಇಲ್ಲಿನ ಕೆಲವು ಪದಪುಂಜಗಳು ವಿಶೇಷವಾಗಿವೆ. ಅವೆಂದರೆ ಅಗ್ನಿಲೋಚನ, ಬಿಲ್ವಮಾಲಾಭೂಷಣ, ಚಿನ್ಮಯ, ಸಚ್ಚಿದಾನಂದ ಹಾಗೂ ಚಿತ್ಸಭೇಷಗಳು.

ಶಿವನಿಗೆ ಮೂರು ಕಣ್ಣುಗಳಿದ್ದು ತ್ರಿನೇತ್ರನೆನಿಸಿದ್ದಾನೆ. ಈ ನೇತ್ರಗಳು ಸೂರ್ಯ, ಚಂದ್ರ ಮತ್ತು ಅಗ್ನಿಗಳು. ಇವುಗಳಲ್ಲಿ ಎರಡು ಕಣ್ಣುಗಳು ಬಾಹ್ಯಜಗತ್ತನ್ನು ಅವಲೋಕಿಸುತ್ತಿದ್ದರೆ, ಮತ್ತೊಂದು ಕಣ್ಣು ಆಂತರಿಕ ಜಗತ್ತಿನಲ್ಲಿ ಸಂಚರಿಸುತ್ತಿರುತ್ತದೆ. ಶಕ್ತಿರೂಪಿಯಾದ ಈ ತೃತೀಯನೇತ್ರ ಮನಸ್ಸನ್ನು ಕಲಕುವ ಕಾಮದೇವನನ್ನು ಭಸ್ಮಮಾಡಿದ ಕಥೆ ಪ್ರಸಿದ್ಧವಾಗಿದೆ.

ಇಲ್ಲಿ, ಪರಮೇಶ್ವರನು ಬಿಲ್ವಮಾಲಾಭೂಷಣನೆನಿಸಿದ್ದಾನೆ. ತ್ರಿದಳಗಳಿಂದ ಕೂಡಿದ ಬಿಲ್ವಪತ್ರೆಯ ಮಹಿಮೆ ವಿಶೇಷವಾದುದು. ಈಶ್ವರನಿಗೆ ಬಿಲ್ವಪತ್ರೆಯ ಸಮರ್ಪಣೆ ಮಾಡಿದಲ್ಲಿ ಶಿವನು ತನ್ನ ಪೂಜೆ ಪರಿಪೂರ್ಣವಾಗಿ ನೆರವೇರಿತೆಂದು ಸಂತೃಪ್ತನಾಗಿ, ಭಕ್ತನ ಅಭೀಷ್ಟಗಳನ್ನು ನೆರವೇರಿಸುವನೆಂಬುದು ನಂಬುಗೆ. ತ್ರಿಗುಣರಹಿತನಾದ ಈಶ್ವರನು ಬಿಲ್ವಪ್ರಿಯ. ಅವನಿಗೆ ಒಂದೇ ಒಂದು ಬಿಲ್ವದಳವನ್ನಿಟ್ಟು ಪೂಜಿಸಿದ್ದೇ ಆದರೆ ಬ್ರಹ್ಮಹತ್ಯಾದೋಷದಂಥ ಘೋರ ಪಾಪಗಳೂ ನಿವಾರಣೆಯಾಗುತ್ತದೆ ಎನ್ನುವುದುಂಟು. ಈ ಸಂದರ್ಭದಲ್ಲಿ

**ತ್ರಿದಳಂ ತ್ರಿಗುಣಾಕಾರಂ ತ್ರಿನೇತ್ರಂಚ ತ್ರಿಯಾಯುಧಮ್।**
**ತ್ರಿಜನ್ಮ ಪಾಪಸಂಹಾರಂ ಏಕಬಿಲ್ವಂ ಶಿವಾರ್ಪಣಮ್॥**
**ದರ್ಶನಂ ಬಿಲ್ವವೃಕ್ಷಸ್ಯ ಸ್ಪರ್ಶನಂ ಪಾಪನಾಶನಮ್।**
**ಅಘೋರಪಾಪಸಂಹಾರಂ ಏಕಬಿಲ್ವಂ ಶಿವಾರ್ಪಣಮ್॥**

ಎಂಬ ಸಾಲುಗಳು ನೆನಪಿಗೆ ಬರುತ್ತವೆ. ಈ ಪ್ರಕಾರ ಒಂದೇ ಒಂದು ಬಿಲ್ವಾರ್ಪಣೆ ಮೂರುಜನ್ಮಗಳ ಪಾಪವನ್ನು ನಿವಾರಿಸುತ್ತದೆ. ಇನ್ನು ಬಿಲ್ವವೃಕ್ಷವನ್ನು ದರ್ಶಿಸಿದರೂ, ಸ್ಪರ್ಶಿಸಿದರೂ ಘೋರಪಾಪಸಂಹಾರವಾಗುತ್ತದೆ. ಏಕೆಂದರೆ ಈಶ್ವರನು ಬಿಲ್ವಪ್ರಿಯ. ಹೀಗಾಗಿ ಬಿಲ್ವವೃಕ್ಷವಿಲ್ಲದ ಶಿವಕ್ಷೇತ್ರವೇ ಇರುವುದಿಲ್ಲ.

ಚಿನ್ಮಯವೆಂಬುದು ಚೈತನ್ಯವು. ಪಂಚಭೂತಗಳಲ್ಲಿ, ಸರ್ವದೇವತೆಗಳಲ್ಲಿ ಇಡೀ ಜಗತ್ತಿನಲ್ಲಿ ಪಸರಿಸಿರುವಂಥದ್ದು. ಜೀವರ ಚಿತ್ತಕ್ಕೂ ಒಡೆಯನಾದ ಚಿತ್ಸಭೇಷನವನು.

ಶಿವಾಷ್ಟೋತ್ತರಶತದ 26ನೇ ನಾಮ ಅಂಧಕಾಸುರಸೂದನ ಎಂಬುದಾಗಿದೆ. ಅಂತೆಯೇ ಈ ಕೃತಿಗುಚ್ಛದ 26ನೇ ಕೃತಿ ಅಂಧಕಾಸುರಸೂದನ ಎಂದೇ ಆರಂಭವಾಗಿದ್ದು ಶಹನ ರಾಗಕ್ಕೆ ಅಳವಡಿಸಲ್ಪಟ್ಟಿದೆ. ಶಹನವು 28ನೇ ಮೇಳದಲ್ಲಿ ಉಪಾಂಗಜನ್ಯ. ಸಂಗೀತಸಂಪ್ರದಾಯಪ್ರದರ್ಶಿನಿಯಲ್ಲಿ ಸುಬ್ಬರಾಮದೀಕ್ಷಿತರು ಈ ರಾಗವನ್ನು ಹರಿಕೇದಾರಗೌಳ ಮೇಳದಲ್ಲಿ ಭಾಷಾಂಗಜನ್ಯವಾಗಿ ಹೇಳಿದ್ದಾರೆ. ಕರುಣರಸಪ್ರಧಾನವಾದ ಈ ರಾಗದ ಆರೋಹಾವರೋಹಗಳು **ಸ ರಿ ಗ ಮ ಪ ಮ ದಾ ನಿ ಸೆ – ಸೆ ನೀ ದ ಪ ಮ ಗ ಮ ರಿ ಗ ರಿ ಸ.** ಆರೋಹದಲ್ಲಿ ವಕ್ರಸಂಚಾರವಿದ್ದರೂ ಅಪರೂಪವಾಗಿ ಒಮ್ಮೆ **ರಿ ಗ ಮ ಪ ದ ನಿ ಸಾ** ಎಂಬಂತೆ ನೇರ ಪ್ರಯೋಗವೂ ಉಂಟು. ದೀರ್ಘಾಲಾಪನೆಗೆ ಅವಕಾಶವುಳ್ಳ ಸಾರ್ವಕಾಲಿಕ ಉತ್ತಮರಾಗವಿದು. ಈ ರಾಗದ ಕೆಲವು ರಚನೆಗಳೆಂದರೆ **ಕರುಣಿಂಪ, ಎವರೇಮಿಬೋಧನ ಜೇಸಿನಾರೋ** ವರ್ಣಗಳು, **ಗಿರಿಪೈನೆಲಕೊನ್ನ, ಈ ವಸುಧಾ, ವಂದನಮುರಘುನಂದನ, ಕಮಲಾಂಬಾನವಾವರಣ, ರಾಮಾ ಇಕನನ್ನು** ಕೃತಿಗಳು. ಪ್ರಸ್ತುತ ಅಂಧಕಾಸುರಸೂದನ ಕೃತಿಯಲ್ಲಿ ಚೆನ್ನಾದ ಚಿಟ್ಟೆಸ್ವರವೊಂದಿದೆ. ಇದರಲ್ಲಿ **ಮದನಿಸರೀ ಪಮದನಿಸಾ** ಸ್ವರಜೋಡಣೆ ಇದ್ದು ತಾರಸ್ಥಾಯಿ ರಿಷಭದಿಂದ ಮಧ್ಯಸ್ಥಾಯಿ ಪಂಚಮಕ್ಕೆ ಜಾರುವ ಭಾಗ ಸುಂದರವಾಗಿದೆ. **ಅಂಧ–ಬಂಧ, ಲೋಚನ–ಭೂಷಣ**ದಂಥ ಆದಿ ಅಂತ್ಯ ಪ್ರಾಸಗಳಲ್ಲಿವೆ.

ಗಂಗಾಧರಾಯ ನಮಃ

## 27. ಗಂಗಾಧರ ನಾಗಕಂಕಣ ಪಾಣೇ

ರಾಗ – ಶಂಕರಾಭರಣ ಆದಿತಾಳ

ಗಂಗಾಧರ ನಾಗಕಂಕಣ ಪಾಣೇ।
ಮಂಗಳದಾಯಕ ಮಧುರಾನಾಯಕ।
ಸಂಗೀತಲೋಲ ಸಜ್ಜನಪಾಲ॥
ಬಾಣಭದ್ರಾದಿ ಭಕ್ತಾನುಗ್ರಹ।
ಪಾರ್ಥ ಪ್ರಹರ ಪರಿತೋಷಿತ।
ಏಣೀ ತರಕರ ಇಂದುಶೇಖರ।
ಇಷ್ಟಾರ್ಥಪ್ರದ ಈಶ ಹರಿಕೇಶ॥

ನಾಗಗಳನ್ನು ಕೈಯಲ್ಲಿ ಕಂಕಣದಂತೆ ಕಟ್ಟಿಕೊಂಡಿರುವ ಗಂಗಾಧರ, ಮಂಗಳನಾಯಕ, ಸಂಗೀತಲೋಲ, ಸಜ್ಜನರನ್ನು ಪಾಲಿಸುವ, ಇಂದುಶೇಖರ, ಈಶ, ಇಷ್ಟಾರ್ಥಗಳನ್ನು ನೀಡಿ ಭಕ್ತರನ್ನು ಪರಿಪಾಲಿಸುವ ಶಿವನನ್ನು ಪ್ರಸ್ತುತ ಕೃತಿಯಲ್ಲಿ ಮುತ್ತಯ್ಯಭಾಗವತರು ಸಂಕೀರ್ತನೆಮಾಡಿದ್ದಾರೆ. ಈ ಕೃತಿಯಲ್ಲಿ ಶಿವನ ಸ್ವರೂಪದ ವಿವರವಿದೆಯಷ್ಟೇ ಹೊರತು, ಭಾಗವತರ ಬೇಡಿಕೆಯೇನೂ ಕಾಣಬರುವುದಿಲ್ಲ. ಹೀಗಾಗಿ ನಾಮಸಂಕೀರ್ತನೆಯನ್ನಷ್ಟೇ ಸಾಹಿತ್ಯವಾಗಿ ಉಳ್ಳ ಕೃತಿಯಿದು.

ಕೃತಿಯಲ್ಲಿ ಬಾಣಭದ್ರಾದಿ ಭಕ್ತಾನುಗ್ರಹ ಹಾಗೂ ಪಾರ್ಥ ಪ್ರಹರ ಪರಿತೋಷಿತಾ ಎಂಬ ಸಾಹಿತ್ಯಭಾಗ ವಿಶಿಷ್ಟವಾದುದು. ಶಿವಪುರಾಣವು ಪರಶಿವನ ಮಹಿಮೆಗಳನ್ನು ಕೃತಿಯ ಉದ್ದಕ್ಕೂ ವರ್ಣಿಸುತ್ತದೆ. ಪ್ರಸ್ತುತ ಬಾಣಭದ್ರಾದಿ ಭಕ್ತಾನುಗ್ರಹ ಗಂಗಾಧರ, ಎಂದರೆ ಬಾಣನಂಥ ಭಕ್ತರಿಗೆ ಅನುಗ್ರಹಿಸಿದ ಶಿವನು ಎಂಬುದು ಅರ್ಥ. ಇದಕ್ಕೆ ಸಂಬಂಧಿಸಿದ ಪೂರ್ವ ಕಥೆಯೊಂದುಂಟು. ಅದೆಂದರೆ, ಬಾಣಾಸುರನು ಮಹಾದಾನಿ ಬಲಿಚಕ್ರವರ್ತಿಯ ಮಗ. ಈತ ತನ್ನ ತಪಸ್ಸಿನಿಂದ ಶಿವನನ್ನು ಒಲಿಸಿಕೊಂಡು ವಿಶೇಷ ಭುಜಬಲವನ್ನು ಪಡೆದಿದ್ದನು. ಅಂತೆಯೇ ಅಹಂಕಾರದಿಂದ "ನನ್ನಂತಹ ತ್ರಿಲೋಕ ವೀರನೊಡನೆ ಕಾದಾಡಬಲ್ಲ ವೀರನನ್ನೂ ಕರುಣಿಸಿ ನನ್ನ ಭುಜಬಲ ಎಲ್ಲರಿಗೂ ತಿಳಿಯುವಂತೆ ಮಾಡು" ಎಂದು ಶಿವನನ್ನು ಪ್ರಾರ್ಥಿಸಿದನು. ಇದರಿಂದ ಕೋಪಗೊಂಡ ಶಿವನು, ಶ್ರೀಕೃಷ್ಣನು ನಿನ್ನ ಮೇಲೆ ಯುದ್ಧಮಾಡುವಂತಾಗಲಿ ಎಂದು ಹೇಳಿ ಅಂತರ್ಧಾನನಾದನು.

ಮುಂದೆ ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧನು ಬಾಣಾಸುರನ ಮಗಳನ್ನು ಮದುವೆಯಾದನು. ಇದರಿಂದ ಕೋಪಗೊಂಡ ಶ್ರೀಕೃಷ್ಣನು ಬಾಣಾಸುರನ ಮೇಲೆ ಯುದ್ಧಮಾಡಿದನು. ಯುದ್ಧದಲ್ಲಿ ಬಾಣಾಸುರನ ಕೈಮೇಲಾಗಿದ್ದಿತು. ಇದರಿಂದ ಶ್ರೀಕೃಷ್ಣನು 'ಶಿವನೇ ಲೋಕವನ್ನು ಕಾಪಾಡುವ ಹೊಣೆಯನ್ನು ನೀನೇ ನನಗೆ ಅನುಗ್ರಹಿಸಿದ್ದೀಯೆ. ಇದೀಗ ಬಾಣಾಸುರನನ್ನು ಪರಾಜಯಗೊಳಿಸಲು ಸಹಾಯಮಾಡು'

ಎಂದು ಪ್ರಾರ್ಥಿಸಿದನು. ಆಗ ಈಶ್ವರನು, 'ಕೃಷ್ಣನೇ ನೀನು ಹೇಳುವುದು ನಿಜವೇ ಆದರೂ ಬಾಣಾಸುರನು ನನ್ನ ಭಕ್ತನಾದವನು. ಆದ್ದರಿಂದ ನಾನು ಅವನನ್ನು ಸಂಹರಿಸಲು ಸಾಧ್ಯವಿಲ್ಲ. ನೀನು ನನ್ನ ಮೇಲೆ ಜೃಂಭಾಸ್ತ್ರವನ್ನು ಪ್ರಯೋಗಿಸಿ ಮೂರ್ಛೆಗೊಳಿಸಿ, ನಂತರ ಅವನ ಸಹಸ್ರಭುಜಗಳನ್ನೂ ಕತ್ತರಿಸು' ಎಂದನು. ಶ್ರೀಕೃಷ್ಣನು ಶಿವನ ಆದೇಶದಂತೆಯೇ ಮಾಡಲು ಬಾಣಾಸುರನ ತುಂಡಾದ ಸಹಸ್ರ ಬಾಹುಗಳು ಸಹಸ್ರ ಸುಬಾಹುಗಳೆಂಬ ಗಣಗಳಾಗಿ ಕೈಲಾಸವನ್ನು ಸೇರಿ ಶಿವಧ್ಯಾನದಲ್ಲಿ ತೊಡಗಿದವು. ಹೀಗೆ ಅಸುರನಾದ ಬಾಣನಿಗೆ ಅನುಗ್ರಹಿಸಿದ ರೀತಿಯನ್ನಿಲ್ಲಿ ಭಾಗವತರು ಸೂಚಿದ್ದಾರೆ.

ಅಂತೆಯೇ ಪಾರ್ಥ ಪ್ರಹರ ಪರಿತೋಷ – ಎಂದರೆ ಪಾರ್ಥನ ಹೊಡೆತದಿಂದ ಸಂತೋಷಿಸಿದವನು. ಈ ಪ್ರಸಂಗದ ಹಿನ್ನೆಲೆ ಹೀಗಿದೆ. ಪರಶಿವನ ಧ್ಯಾನ, ಪೂಜೆ ಮತ್ತು ಆರಾಧನೆಯಿಂದ ಶ್ರೇಯಸ್ಸುಂಟಾಗುತ್ತದೆ ಎಂಬ ವ್ಯಾಸಮಹರ್ಷಿಗಳ ಮಾತನ್ನು ಕೇಳಿ ಅರ್ಜುನನು ಇಂದ್ರಕೀಲಪರ್ವತಕ್ಕೆ ಹೋಗಿ ಶಿವನನ್ನು ಕುರಿತು ಘೋರತಪಸ್ಸನ್ನಾಚರಿಸಿದನು. ಶಿವನು ಮಾರುವೇಷದಲ್ಲಿ ಬಂದು ಅರ್ಜುನನ ಸಂಗಡ ಮುಷ್ಠಿಯುದ್ಧವನ್ನು ಮಾಡಿದನು. ಕಿರಾತವೇಷದಲ್ಲಿದ್ದ ಶಿವನಿಂದ ಅರ್ಜುನನು ಸೋಲುವ ಹಂತಕ್ಕೆ ಬಂದನು. ಆಗ ಶಿವನಿಗೆ ಅರ್ಜುನನ ಬೆನ್ನನ್ನು ನೋಡಬೇಕೆಂಬ ಪಾರ್ವತಿಯ ಅಪೇಕ್ಷೆ ಕೂಡಲೇ ನೆನಪಾಯಿತು. ಮುಷ್ಠಿಯುದ್ಧದಲ್ಲಿ ತಾನು ಗೆದ್ದದ್ದೇ ಆದರೆ ಪಾರ್ವತಿಯ ಆಸೆ ಈಡೇರಲಾಗದೆಂದು ತಿಳಿದು ಪರಶಿವನು ಸೋತಂತೆ ಕೆಳಗೆ ಬಿದ್ದನು. ಆಗ ಅರ್ಜುನನು ಶಿವನ ಮೇಲೆ ಹತ್ತಿ ಕುಳಿತಾಗ ಪಾರ್ವತಿಯ ಕೋರಿಕೆಯೂ ನೆರವೇರಿತು. ಕೂಡಲೇ ಈಶ್ವರನು ತನ್ನ ಮಾರುವೇಷವನ್ನು ಕಳಚಿ ನಿಜರೂಪವನ್ನು ಅರ್ಜುನನಿಗೆ ತೋರಿದನು. ಇಲ್ಲಿ, ಮುಷ್ಠಿಯುದ್ಧ ಮಾಡಿದಾಗ ಅರ್ಜುನನ ಹೊಡೆತದಿಂದ ಶಿವನು ಸಂತೋಷಿಸಿದನೆಂಬ ಪೂರ್ವ ಕಥೆ ಅಳವಟ್ಟಿದೆ.

ಇನ್ನು, ಕೃತಿಯು 29ನೇ ಮೇಳ ಶಂಕರಾಭರಣಕ್ಕೆ ಸಂಯೋಜನೆಗೊಂಡಿದೆ. ಧೀರ ಎಂಬ ಮುಂಪ್ರತ್ಯಯ ಹೊಂದಿರುವ ಈ ರಾಗವು ಎಲ್ಲ ದೇಶಗಳ ಸಂಗೀತ ಪದ್ಧತಿಯಲ್ಲೂ ಕಾಣಬರುತ್ತದೆ. ಪಾಶ್ಚಾತ್ಯ ಸಂಗೀತ ಪದ್ಧತಿಯಲ್ಲಿ ಇದನ್ನು Major Diotonic Scale ಎನ್ನುತ್ತಾರೆ. ಹಿಂದೂಸ್ಥಾನೀ ಸಂಗೀತಪದ್ಧತಿಯಲ್ಲಿ ಬಿಲಾವಲ್ ಥಾಟ್ ಎನ್ನಲಾಗಿದೆ. ಶಂಕರಾಭರಣ ರಾಗದಲ್ಲಿ ಮಧ್ಯಮಸ್ವರಕ್ಕೆ ನೀಡುವ ಊರ್ಧ್ವ ಮುಖ, ಅಧೋಮುಖ ಚಲನೆ ಅದರ ಸ್ಥಾನವನ್ನು ವ್ಯತ್ಯಾಸವಾಗಿ ತೋರುತ್ತದೆ. ರಿಷಭ, ದೈವತಗಳು ಕಂಪಿತ ಸ್ವರಗಳೊಂದಿಗೆ ಪ್ರಯೋಗವಾದರೆ ಚೆನ್ನಾಗಿರುತ್ತದೆ. ಧಾಟು, ಜಂಟಿಸ್ವರ ಪ್ರಯೋಗಗಳು ಸುಂದರವಾಗಿರುತ್ತವೆ. ತ್ರಿಸ್ಥಾಯಿಯಾದ, ಸಾರ್ವಕಾಲಿಕವಾದ, ವಿಸ್ತಾರ ರಾಗಾಲಾಪನೆಗೆ ಅವಕಾಶವಿರುವ ರಾಗವಿದು. ಮೂರ್ಛನಾಕಾರಕ ಮೇಳವಾದ ಇದರಲ್ಲಿ ಗೀತೆ, ವರ್ಣ, ಕೃತಿ, ಪದ, ತಿಲ್ಲಾನಗಳಂತಹ ಎಲ್ಲ ರಚನೆಗಳನ್ನೂ ಕಾಣಬಹುದು. ಪ್ರಸಿದ್ಧವಾದ ಕೆಲವು ರಚನೆಗಳೆಂದರೆ, **ಆರೇರೆ** (ಗೀತೆ, ಇದು ಸಿಂಹನಂದನತಾಳದಲ್ಲಿ ಅಳವಟ್ಟಿದೆ), **ಸಾಮಿನಿನ್ನೇ**, **ಚಲಮೇಲ** ವರ್ಣಗಳು, **ಮನಸು ಸ್ವಾಧೀನಮೈನ**, **ಏಮಿನೇರಮು**, **ಭಕ್ತಿಭಿಕ್ಷ**, **ಎಂದುಕುಪೆದ್ದಲ**, **ಸರೋಜದಳನೇತ್ರಿ**, **ದೇವಿ ಮೀನನೇತ್ರಿ**, **ಅಕ್ಷಯಲಿಂಗವಿಭೋ**, **ದಕ್ಷಿಣಾಮೂರ್ತೇ**, **ನಾಗಲಿಂಗಂ**, **ಸುಂದರೇಶ್ವರಾಯ**, **ದೇವೀ ಜಗಜ್ಜನನಿ**, **ಬಾಗುಮೀರಗನು** ಮುಂತಾದವು.

ಲಲಾಟಾಕ್ಷಾಯ ನಮಃ

## 28. ಲಲಾಟಾಕ್ಷ ನಮೋಸ್ತುತೇ

**ರಾಗ – ನಾಟ** **ರೂಪಕತಾಳ**

**ಲಲಾಟಾಕ್ಷ ನಮೋಸ್ತುತೇ ರಮ್ಯಗಾತ್ರ ನಮೋಸ್ತುತೇ।**
**ಹಾಲಾಹಲ ಗಳಧರೇಂದು ಕಲಾಧರ ಶಿವ ನಮೋಸ್ತುತೇ।**
**ಕನಕಗಿರಿ ಶಿಖರನಿಲಯ ಕಾಳನಾಗಮಣಿವಲಯ।**
**ದಿನಕರೇಂದು ಶಿಖಿನಯನ ತ್ರಿಪುರಾಂತಕ ತ್ರಿಲೋಚನ।**
**ಧನಪತಿ ಪೂಜಿತ ಚರಣ ಸಪ್ತಸ್ವರ ಸಾರಗುಣ।**
**ಅನಘ ಅಮಲ ಹರಿಕೇಶ ಅಂಬಾಪತೆ ನಮೋಸ್ತುತೇ।**

ಪರಮೇಶ್ವರನ ವೈಶಿಷ್ಟ್ಯವೆಂದರೆ ಆತ ಶೀಘ್ರ ಫಲಪ್ರದ. ನಾವು ಯಾವ ವಿಧವಾದ ಕಠಿಣ ಕೈಂಕರ್ಯವನ್ನು ಸಲ್ಲಿಸದಿದ್ದರೂ ಅವನನ್ನು ಸ್ಮರಿಸುವುದು, ವಂದಿಸುವುದರಿಂದ ಲಭಿಸುವ ಪುಣ್ಯ ಅತಿಶಯವಾದುದು. ಶಿವನೊಬ್ಬನೇ ಭಜಕನ ಇಷ್ಟಾರ್ಥವಾದ ಭವಸಾಗರ ಸಂತರಣವನ್ನು ಶೀಘ್ರವಾಗಿ ಕರುಣಿಸಲು ಸಮರ್ಥನೆಂಬ ಮಾತನ್ನು ಶ್ರೀಮನ್ನಾರಾಯಣನೇ ಹೀಗೆಂದಿದ್ದಾನೆ.

**ನಾಹಂ ಸಂಸಾರಮಗ್ನಾನಾಂ ಸಾಕ್ಷಾತ್ ಸಂಸಾರಮೋಚಕಃ**
**ಬ್ರಹ್ಮಾದಿ ದೇವತಾಃ ಸರ್ವೇ ನ ಹಿ ಸಂಸಾರಮೋಚಕಾಃ**
**ಸರ್ವಮನ್ಯಂ ಪರಿತ್ಯಜ್ಯ ಶಿವಂ ಸಾಂಬಂ ಸದಾ ಭಜ॥**

ಇದರಿಂದಲೇ ಈ ಭವಸಾಗರವನ್ನು ದಾಟಲಿಚ್ಛಿಸಿದ ನಮ್ಮ ಸಂತಭಕ್ತರು, ವಾಗ್ಗೇಯಕಾರರು, ಕವಿಗಳು ಎಲ್ಲರೂ ಶಿವನನ್ನು ಕೀರ್ತಿಸಿದ್ದಾರೆ. ಪ್ರಸ್ತುತ, ಭಾಗವತರು, ಲಲಾಟಾಕ್ಷ ನಮೋಸ್ತುತೇ ಎಂದಾರಂಭಿಸಿರುವ ಈ ಕೃತಿಯಲ್ಲಿ ಸದಾಶಿವನನ್ನು ಪುನಃ ಪುನಃ ವಂದಿಸಿದ್ದಾರೆ. ನವವಿಧ ಭಕ್ತಿಗಳಲ್ಲಿ 6ನೆಯದಾದ ವಂದನ ಭಕ್ತಿ ಇಲ್ಲಿದೆ. ಅವರು ಲಲಾಟಾಕ್ಷನಾದ, ರಮ್ಯಗಾತ್ರನಾದ, ಹಾಲಾಹಲವನ್ನು ತನ್ನ ಕಂಠದಲ್ಲಿರಿಸಿ ನೀಲಕಂಠನಾದ, ಚಂದ್ರಧರ ಶಿವನನ್ನು ಇಲ್ಲಿ ವಂದಿಸಿದ್ದಾರೆ. ಬಂಗಾರದ ಬೆಟ್ಟದ ತುದಿಯಲ್ಲಿ ಮನೆ ಮಾಡಿಕೊಂಡು ಕಪ್ಪಾದ ನಾಗಮಣಿಯಿಂದಾವೃತನಾಗಿ ತ್ರಿಪುರಾಂತಕನೂ, ಸೂರ್ಯಚಂದ್ರಾಗ್ನಿಗಳನ್ನು ತನ್ನ ಮೂರು ಕಣ್ಣಾಗಿ ಹೊಂದಿದವನೂ, ಇಂದ್ರಾದಿ ಪೂಜಿತನಾಗಿ ಸಪ್ತಗುಣಸಾರನೇ ಆಗಿರುವ, ಅಘರಹಿತ, ನಿರ್ಮಲ ಅಂಬಾಪತಿಯನ್ನು ನಮಿಸಿದ್ದಾರೆ.

ಶಿವೋಪಾಸನೆಯಿಂದ ಮನುಷ್ಯನು ಗುಣಾತೀತನಾಗುತ್ತಾನೆ. ಅವನಲ್ಲಿರುವ ತ್ರಿಗುಣಗಳೂ ಭಸ್ಮವಾಗುತ್ತವೆ. ಆದ್ದರಿಂದಲೇ ದೇವನನ್ನು ತ್ರಿಪುರಾರಿ, ತ್ರಿಪುರಾಂತಕ ಎಂದೂ ಹೇಳುವುದುಂಟು. ಇನ್ನು, ಶಿವನ ಪ್ರತಿಯೊಂದು ಆಭರಣ ಅಥವಾ ಅಸ್ತ್ರ–ಶಸ್ತ್ರ ಅಥವಾ ಅಂಗಾಂಗವೂ ಅಧ್ಯಾತ್ಮ ತತ್ವಬೋಧಕಗಳೇ ಆಗಿವೆ.

ಪುರುಷಸೂಕ್ತವು **ಚಂದ್ರಮಾ ಮನಸೋ ಜಾತಃ** ಎನ್ನುತ್ತದೆ. ಚಂದ್ರನರೂಪ ಮನಸ್ಸಿನ ಪ್ರತಿಕೃತಿ. ಶಿವನು ಚಂದ್ರನನ್ನು ಧರಿಸಿ ಚಂದ್ರಶೇಖರನೆನಿಸಿದ್ದಾನೆ. ಎಂದರೆ ಆತನಲ್ಲಿ ಮನೋನಿಗ್ರಹವಿದೆ ಎಂದರ್ಥ. ಆತ ಗಜಚರ್ಮಾಂಬರಧಾರಿಯಾಗಿರುವುದು ಅಹಂಕಾರನಿಗ್ರಹವನ್ನೂ, ಆತನ ಬಳಿಯಿರುವ ಜಿಂಕೆಯು ಚಿತ್ತಚಾಂಚಲ್ಯದ ನಿರೋಧಸೂಚಕತೆಯನ್ನೂ, ಸರ್ಪಧಾರಣೆ ಕ್ರೋಧನಿಗ್ರಹವನ್ನೂ ಬೋಧಿಸುತ್ತವೆ. ಇನ್ನು ಈಶ್ವರನ ಜಟೆಯಿಂದ ಹರಿವ ಗಂಗೆ ಶಾಂತಿ, ಪವಿತ್ರತೆ, ಮೋಕ್ಷವೇ ಮೊದಲಾದ ಸದ್ಗುಣಗಳ ಸೂಚಕವೆನ್ನುತ್ತಾರೆ. ಈಶ್ವರನ ತ್ರಿಶೂಲ ಸತ್ವ, ರಜಸ್ಸು, ತಮಸ್ಸು ಈ ಗುಣಗಳಿಂದ ರಚಿತವಾದುದು. ಇದರ ಮಹತ್ವವೆಂದರೆ ಸಾಧಕನು ಜಗತ್ ವ್ಯಾಪ್ತವಾದ ಈ ತ್ರಿಗುಣಗಳನ್ನು ಗೆಲ್ಲಲು ನಿರಂತರ ಪ್ರಯತ್ನಿಸಬೇಕೆಂಬ ಸೂಚನೆಯ ಸಂಕೇತ. ಅಂತೆಯೇ ಶಿವನ ವಾಹನ ವೃಷಭ, ಕೈಯಲ್ಲಿ ಹಿಡಿದ ಡಮರು ಇವೆರಡೂ ಶಕ್ತಿರೂಪಗಳೇ. ವೃಷಭವು ಜಗತ್ತಿನ ಮಹಾಪ್ರಾಣ ರೂಪವಾಗಿ ಹರಡಿದ ಶಕ್ತಿ ಎನಿಸಿದರೆ ಡಮರು ನಾದಾನುಸಂಧಾನದ ಪ್ರತೀಕ. ಈ ಡಮರುವಿನ ನಾದವೇ ಜಗದ್ವ್ಯಾಪಾರಕ್ಕೆ ಮೂಲ ಹಾಗೂ ಇದೇ ಪಾಣಿನಿ ಮಹರ್ಷಿಗಳಿಗೆ ಶಬ್ದಶಾಸ್ತ್ರರಚನೆಗೆ ಮೂಲವಾಯಿತು ಎಂಬುದಾಗಿದೆ.

ಶಿವಾಷ್ಟೋತ್ತರಶತದಲ್ಲಿ 28ನೆಯ ನಾಮ ಲಲಾಟಾಕ್ಷ. ಈ ನಾಮದಿಂದಲೇ ಮುತ್ತಯ್ಯಭಾಗವತರು ಕೃತಿಯನ್ನಾರಂಭಿಸಿದ್ದಾರೆ. ಕೃತಿಯು ನಾಟರಾಗದಲ್ಲಿ ಸಂಯೋಜನೆಗೊಂಡಿದೆ. ನಾಟವು 36ನೇ ಮೇಳದಲ್ಲಿ ಜನ್ಯವಾದ ಸಂಪೂರ್ಣ ಔಡವ ಉಪಾಂಗರಾಗ. ಪ್ರಥಮ ಗುಂಪಿನ ಘನರಾಗ ಪಂಚಕಗಳಲ್ಲಿ ಒಂದಾದ ರಾಗ. ಇದರ ಆರೋಹಾವರೋಹಗಳು **ಸ ರಿ ಗ ಮ ಪ ದಾ ನಿ ಸೆ – ಸೆ ನಿ ಪ ಮ ರೀ ಸ.** ಷಟ್‌ಶೃತಿರಿಷಭ, ಷಟ್‌ಶೃತಿದೈವತಗಳನ್ನು ಹೊಂದಿದ ಮಂಗಳಕರ ಹಾಗೂ ವೀರರಸ, ಭಕ್ತಿರಸ ಪ್ರಧಾನ ರಾಗ. ಜಂಟಿ, ದಾಟು, ಆಹತ, ಪ್ರತ್ಯಾಹತ ಪ್ರಯೋಗಗಳೆಲ್ಲವೂ ಈ ರಾಗದಲ್ಲಿ ಉಂಟು. ಆದಿನಾಟ, ಅಂತ್ಯಸುರಟಿ ಎಂಬ ಹೇಳಿಕೆಯೊಂದು ಪ್ರಸಿದ್ಧವಾಗಿದೆ. ಹೀಗಾಗಿ ಸಂಗೀತ ಕಛೇರಿಗಳಾರಂಭದಲ್ಲಿ ಈ ರಾಗ ಪ್ರಯೋಗವನ್ನು ಕಾಣುತ್ತೇವೆ. ಈ ರಾಗದಲ್ಲಿ ತಾನವನ್ನು ನುಡಿಸುವ ಪದ್ಧತಿಯೂ ಇದೆ. ಕೆಲವು ಪ್ರಸಿದ್ಧ ರಚನೆಗಳೆಂದರೆ **ಅಮರೀಕಭರೀ**(ಗೀತೆ), **ಸರಸಿಜ, ಸಮುಖಮು** ವರ್ಣಗಳು. **ನಿನ್ನೇ ಭಜನ, ಮಹಾಗಣಪತಿಂ, ಸರಸೀರುಹಾಸನಪ್ರಿಯೆ, ಇಹ ಪರ ಸಾಧನ, ಕರಿಮುಖವರದ** ಮುಂತಾದುವು. ಈ ರಾಗದ ಅತ್ಯಂತ ದೀರ್ಘವಾದ ರಚನೆಯೆಂದರೆ ತ್ಯಾಗರಾಜ ವಿರಚಿತ ಪಂಚರತ್ನ ಕೃತಿ **ಜಗದಾನಂದಕಾರಕ.** ಈ ರಚನೆಯು ರಾಗದ ವಿಶಿಷ್ಟ ಸಂಚಾರಗಳೆಲ್ಲವನ್ನೂ ಹೊಂದಿ ನಾಮಸಂಕೀರ್ತನೆಗಾಗಿಯೇ ರಚಿತವಾದಂತಿದೆ.

ಕಾಲಕಾಲಾಯ ನಮಃ

## 29. ಕಾಲಕಾಲಂ ಕಪಾಲಿನಂ ವಂದೇ

**ರಾಗ – ಗೌಳ** **ತ್ರಿಪುಟತಾಳ**

**ಕಾಲಕಾಲಂ ಕಪಾಲಿನಂ ವಂದೇ।**
**ಫಾಲಲೋಚನಂ ಭಕ್ತಪಾಲಿನಂ ಶೂಲಪಾಣಿಂ ಸುಂದರಾನನಂ॥**
**ಮೇರುಸದನಂ ವಿರೂಪಾಕ್ಷಂ ಸಾರಸಪದಂ ಶಂಕರಂ।**
**ವೀರಭದ್ರಂ ವಿಶ್ವನಾಥಂ ವಾರಣಂ ಪರಂ ವರಹರಿಕೇಶಂ॥**

ಯಮನಿಗೂ ಯಮನೋಪಾದಿಯಿರುವ ಬ್ರಹ್ಮಕಪಾಲಧಾರಿಗೆ ಕೃತಿಕರ್ತರು ವಂದನೆಗಳನ್ನು ಈ ಕೃತಿಯಲ್ಲಿ ಸಲ್ಲಿಸಿದ್ದಾರೆ. ಹಣೆಗಣ್ಣನೂ, ಭಕ್ತಪಾಲಕನೂ, ಶೂಲಪಾಣಿಯೂ ಆದ ಸುಂದರ ಮುಖದವನು ಶಿವನಾಗಿದ್ದಾನೆ. ಮೇರುಪರ್ವತದಲ್ಲಿ ನೆಲೆಸಿರುವ ವಿರೂಪಾಕ್ಷ, ಶಂಕರನೂ, ವೀರಭದ್ರನೂ, ವಿಶ್ವನಾಥನೂ ಆಗಿದ್ದಾನೆ.

ಶಿವಾಷ್ಟೋತ್ತರಶತದ 29ನೇ ನಾಮದಿಂದಲೇ ಕೃತಿಯು ಆರಂಭವಾಗಿ ಗೌಳರಾಗಕ್ಕೆ ಅಳವಟ್ಟಿದೆ. ವಂದೇ ಎಂಬ ಪದವೊಂದನ್ನು ಬಿಟ್ಟರೆ ಉಳಿದವೆಲ್ಲವೂ ಅನುಸ್ವಾರದೊಂದಿಗೇ ಮುಕ್ತಾಯವಾಗಿರುವುದೊಂದು ವಿಶೇಷ. ಭಾವಪೂರ್ಣವಾದ ಚಿಟ್ಟೆಸ್ವರ ಈ ಕೃತಿಯಲ್ಲಿದೆ. 28ನೇ ಕೃತಿ ನಾಟದಲ್ಲಿದ್ದರೆ, 29ನೇ ಈ ಕೃತಿ ಗೌಳದಲ್ಲಿದೆ. ಗೌಳರಾಗವೂ ಪ್ರಥಮ ಗುಂಪಿನ ಘನರಾಗ ಪಂಚಕಗಳಲ್ಲಿ ಒಂದಾದ ರಾಗ. 15ನೇ ಮೇಳದಲ್ಲಿ ಜನ್ಯವಾದ ಗೌಳವು **ಸ ರಿ ಮ ಪ ನಿ ಸ – ಸ ನಿ ಪ ಮ ರಿ ಗ ಮ ರಿ ಸ** ಎಂಬ ಆರೋಹಾವರೋಹಗಳನ್ನು ಹೊಂದಿದೆ. ಗೋವಿಂದಾಚಾರ್ಯರ ಸಂಗ್ರಹಚೂಡಾಮಣಿಯಲ್ಲಿ **ಸ ರಿ ಗ ಮ ರಿ ಮ ಪ ನಿ ಸ – ಸ ನಿ ಪ ಮ ಗ ಮ ರಿ ಸ** ಎಂಬ ಆರೋಹಾವರೋಹಗಳನ್ನು ಹೇಳಲಾಗಿದೆ. ತ್ಯಾಗರಾಜ ವಿರಚಿತ ದುಡುಕುಗಲ ಪಂಚರತ್ನ ಕೃತಿಯಲ್ಲಿ **ಸರಿಗಾಮ** ಎಂಬ ಸಂಚಾರವಿರುವುದನ್ನು ನಾವಿಲ್ಲಿ ಸ್ಮರಿಸಬಹುದು. **ಸರಿಗಮರಿಸ, ಪಮಗಮರಿಸ, ಪಮರಿಗಮರೀಸ**ದಂತಹ ಸಂಚಾರಗಳು ರಾಗಭಾವವನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಈ ರಾಗದಲ್ಲಿನ ರಿಷಭವು ಶುದ್ಧರಿಷಭಕ್ಕಿಂತ ಸ್ವಲ್ಪ ಕಡಿಮೆಯಿದ್ದು, ಶಾಸ್ತ್ರಪ್ರಕಾರ ಏಕಶೃತಿ ರಿಷಭ ಎನಿಸಿದೆ. ಪಾಂಡಿತ್ಯಪೂರ್ಣವಾದ ಈ ಉಪಾಂಗ ರಾಗದಲ್ಲಿ ಜಂಟಿಸ್ವರ, ದಾಟುಸ್ವರ, ಆಹತ ಪ್ರತ್ಯಾಹತ ಗಮಕಾದಿಗಳ ಪ್ರಯೋಗವಿದ್ದು ತ್ರಿಸ್ಥಾಯಿಯಲ್ಲೂ ವ್ಯಾಪ್ತಿಯುಳ್ಳದ್ದಾಗಿದೆ. ಗೌಳರಾಗದ ಕೆಲವು ಮುಖ್ಯ ರಚನೆಗಳೆಂದರೆ **ಶ್ರೀಮಹಾಗಣಪತಿ, ಪಾಲಯಾಶುಮಾಂ, ಪ್ರಣಮಾಮ್ಯಹಂ, ಏಲನೀದಯ** ಹಾಗೂ ತ್ಯಾಗರಾಜರ **ದುಡುಕುಗಲ** ಎಂದಾರಂಭವಾಗುವ ಪಂಚರತ್ನ ಕೃತಿಗಳು.

ಕೃಪಾನಿಧಯೇ ನಮಃ

## 30. ಕೃಪಾನಿಧೇ ಕೃಪಾಜಲಧೇ

ರಾಗ – ಹಂಸನಾದ ತ್ರಿಪುಟತಾಳ

ಕೃಪಾನಿಧೇ ಕೃಪಾಜಲಧೇ।
ಕಪಾಲಹಸ್ತ ಸ್ಕಂದತಾತ ಉಪಮಾರಹಿತ ಉರಗಾಭರಣ।
ವೇದಕಾರಣ ವಿಷ್ಣುಪ್ರಿಯಕರ ಭೇದರಹಿತ ಬೃಹದೀಶ।
ನಾದರೂಪ ನಮೋಸ್ತುತೇ ನಟನರಂಜನ ಶ್ರೀಹರಿಕೇಶ॥

ಪ್ರಸ್ತುತ ಕೃತಿಯಲ್ಲಿ ಮುತ್ತಯ್ಯಭಾಗವತರು ವಿರೋಧಾಭಾಸವಾದ ಎರಡು ಅಂಶಗಳನ್ನು ಹೇಳುತ್ತಾರೆ. ಇದು ಭಕ್ತಿ ಪ್ರವಾಹದಲ್ಲಿ ನಡೆಯುವಾಗ ಸಹಜವೇ ಎನ್ನಬಹುದು. ಇಲ್ಲಿ ಈಶ್ವರನನ್ನು ಅವರು ಒಮ್ಮೆ ಕೃಪಾಸಮುದ್ರನೆಂದೂ (ಕೃಪಾಜಲಧಿ) ಮತ್ತೊಮ್ಮೆ ಯಾವುದೇ ಉಪಮೆಯಿಲ್ಲದೆ ಉಪಮಾರಹಿತನೆಂದೂ ಹೇಳಿದ್ದಾರೆ. ಇದೇನೇ ಇರಲಿ ಭಗವತ್ಕೃಪೆಯೆಂಬುದು ಆತನ ದಯಾರೂಪ. ಈಶ್ವರನ ದಯೆ ಸಾಟಿಯಿಲ್ಲದ್ದು. ದಯೆಯಿಂದಲೇ ದೇವರಿಗೆ ಹಿರಿಮೆ. ದಯೆಯಿಲ್ಲದ ದೇವರು ದೇವರೆನಿಸದೆ ಇಡೀ ಜಗತ್ತನ್ನು ತನ್ನ ಶಕ್ತಿಯಿಂದ ನುಂಗಿಬಿಡುವ ಸಂಭವವುಂಟು. ಭಕ್ತರೆಲ್ಲರಿಗೂ ದೇವರ ಸೌಲಭ್ಯದಲ್ಲಿ ಹೆಚ್ಚು ತೃಪ್ತಿ. ದೇವರ ಶಕ್ತಿಯು ಸ್ತುತ್ಯರ್ಹವಾದರೂ ಅದು ಭಕ್ತನ ಹೃದಯಕ್ಕೆ ಸಮೀಪವೆನಿಸುವುದು ಅದು ದಯೆಯೊಂದಿಗಿದ್ದಾಗ ಮಾತ್ರ. ದೇವರು ಕೃಪಾನಿಧಿಯೂ, ಕೃಪಾಜಲಧಿಯೂ ಹೌದೆಂಬ ಭಾವನೆಯೇ ಭಕ್ತನಿಗೆ ದೇವರಲ್ಲಿ ಹೆಚ್ಚು ಪ್ರೀತಿ ಮೂಡಿಸುತ್ತದೆ. ಈ ಸಂದರ್ಭದಲ್ಲಿ ಶ್ರೀರಾಮಕೃಷ್ಣಪರಮಹಂಸರ ಅಭಿಪ್ರಾಯವೊಂದು ನೆನಪಿಗೆ ಬರುತ್ತದೆ. ಅವರೆನ್ನುತ್ತಾರೆ – ಭಯ ಹುಟ್ಟಿಸುವ ದೇವರಲ್ಲಿ ಸಲಿಗೆಯಾಗಲೀ, ಪ್ರೀತಿಯಾಗಲೀ ಮೂಡುವುದು ಕಷ್ಟಸಾಧ್ಯ. ಆದ್ದರಿಂದಲೇ ಭಕ್ತರೆಲ್ಲರೂ ದೇವರ ಸೌಲಭ್ಯರೂಪದಿಂದ ಅರ್ಥಾತ್ ದಯೆಯಿಂದ ಆಕರ್ಷಿತರಾಗುತ್ತಾರೆ. ಇಲ್ಲಿ ಮುತ್ತಯ್ಯಭಾಗವತರೂ ಈಶ್ವರನನ್ನು ಕೃಪಾನಿಧಿ, ಕೃಪಾಜಲಧಿ ಎಂದು ಸಂಬೋಧಿಸಿರುವುದೂ ಈ ನಿಟ್ಟಿನಿಂದಲೇ.

ಇನ್ನು ದೇವರು ಛಾಂದೋಗ್ಯ ಉಪನಿಷತ್ತು ಹೇಳುವಂತೆ ಏಕಮೇವಾದ್ವಿತೀಯ ಅಲ್ಲದೆ ಭೇದರಹಿತ. ಯಾವುದರಲ್ಲಿ ಎರಡು ಅಥವಾ ಭೇಧವಿಲ್ಲವೋ ಅದೇ ಅಂತರಹಿತ ಅಥವಾ ಅದ್ವೈತ. ಭೇಧವೆಂಬುದು ಸಜಾತೀಯ, ವಿಜಾತೀಯ ಮತ್ತು ಸ್ವಗತಗಳೆಂದು ಮೂರು ಬಗೆ. ಒಂದೇ ವರ್ಗಕ್ಕೆ ಸೇರಿದ ಎರಡು ವಸ್ತುಗಳಲ್ಲಿ ಅಥವಾ ಇಬ್ಬರಲ್ಲಿನ ಭೇಧ ಸಜಾತೀಯ ಭೇಧ. ಬೇರೆ ಬೇರೆ ವರ್ಗದ ಎರಡು ವಸ್ತುಗಳಲ್ಲಿ ಎಂದರೆ ಮನುಷ್ಯ – ಸಸ್ಯ ಇತ್ಯಾದಿಗಳಲ್ಲಿರುವ ಭೇಧ ವಿಜಾತೀಯ ಭೇಧ. ಒಂದೇ ವಸ್ತುವಿನೊಳಗೆ, ಉದಾಹರಣೆಗೆ ಮನುಷ್ಯನೊಳಗೇ ಕಾಣುವ ಅಂಗಾಂಗಭೇಧ ಸ್ವಗತಭೇಧ. ಈಶ್ವರನಲ್ಲಿ ಮೂಲತಃ ಈ ಭೇಧಗಳಾವುವೂ ಇಲ್ಲವಾದ್ದರಿಂದಲೇ ಆತ ಅದ್ವಿತೀಯ ಎಂದರೆ ಆತನಿಗೆ ಸಮನಾದ ಇನ್ನೊಂದು ಶಕ್ತಿಯಿಲ್ಲ, ಉಪಮೆ ಇಲ್ಲ. ಹೀಗೆಂದೇ ಭಕ್ತಿಯ ತೀವ್ರತೆಯಲ್ಲಿ ಭಾಗವತರು ಹಾಡಿದ್ದಾರೆ. ಈ

ಸಂದರ್ಭದಲ್ಲಿ ಆಚಾರ್ಯ ಶಂಕರರು ಶಿವಾನಂದಲಹರಿಯಲ್ಲಿ ಶಿವಮಹಿಮೆಯನ್ನು ಅತಿಶಯವಾಗಿ ಕೊಂಡಾಡಿರುವ ಶ್ಲೋಕವನ್ನು ನಾವು ಸ್ಮರಿಸಬಹುದು.

**ಪುನಶ್ಚತ್ವಾಂ ದ್ರಷ್ಟುಂ ದಿವಿ ಭುವಿವಹನ್ ಪಕ್ಷಿಮೃಗತಾಮದೃಷ್ಟಾ**
**ತತ್ಖೇದಂ ಕಥಮಿಹ ಸಹೇ ಶಂಕರವಿಭೋ.**

ಇಲ್ಲಿ ಈಶ್ವರನ ಆದ್ಯಂತವನ್ನು ಅರಿಯಲು ಹೊರಟ ಬ್ರಹ್ಮ, ವಿಷ್ಣುಗಳ ನಿಸ್ಸಹಾಯಕತೆಯಿದೆ. ಹೀಗಿರುವಾಗ ಸಾಮಾನ್ಯರು ಅದನ್ನು ಅರಿಯಲೇ ಸಾಧ್ಯವಿಲ್ಲವೆಂಬುದು ಕೃತಿಕರ್ತರ ಅಭಿಪ್ರಾಯ. ಕೃಪಾನಿಧೇ, ಕೃಪಾಜಲಧೇ ಕೃತಿಯಲ್ಲಿ ಕಾಣಬರುವ ಇನ್ನೊಂದು ವಿಶೇಷ **ನಾದರೂಪ ನಮೋಸ್ತುತೇ ನಟನ** ರಂಜನ ಎಂಬ ಸಾಲು. ಸಂಗೀತಚರಿತ್ರೆಯಲ್ಲಿ ಮೊದಲಿಗೆ ಸಂಗೀತ ಎಂಬುದರಲ್ಲಿ **ಗೀತವಾದಿತ್ರ [illegible] ನೃತ್ಯಾನಾಂ ತ್ರಯಂ ಸಂಗೀತಮುಚ್ಯತೇ, ಗೀತಂ ವಾದ್ಯಂ ನರ್ತನಂಚತ್ರಯಂ ಸಂಗೀತಮುಚ್ಯತೇ** – ಎಂದರೆ, ಗೀತ, ವಾದ್ಯ, ನರ್ತನಗಳು ಸೇರಿದಂತೆ ಸಂಗೀತವೆನಿಸಿದ್ದಿತು. ಕಾಲಾನಂತರ, **ಗೀತವಾದ್ಯೋಭಯಂ ಯತ್ರ ಸಂಗೀತಮಿತಿ ಕೇಚನ** ಎಂದು ಗೀತವಾದ್ಯಗಳಷ್ಟೇ ಸಂಗೀತವೆನಿಸಿ ನರ್ತನವು ಈ ಸಮುಚ್ಚಯದಿಂದ ಪ್ರತ್ಯೇಕಗೊಂಡಿತು. ಮುತ್ತಯ್ಯಭಾಗವತರು ನಾದರೂಪನಾದ ಈಶ್ವರನು ನಟನದಿಂದಲೂ ರಂಜಿಸಲ್ಪಡುವನೆನ್ನುತ್ತಾ ಗೀತ – ವಾದ್ಯ – ನರ್ತನಗಳ ಮೇಳೈಕೆಯನ್ನೇ ಇಲ್ಲಿ ಸಮರ್ಥಿಸಿದ್ದಾರೆ.

ಕೃತಿಯು ಅಪರೂಪವಾದ ಹಂಸನಾದವೆಂಬ ರಾಗದಲ್ಲಿ ಸಂಯೋಜಿತವಾಗಿದೆ. ಹಂಸನಾದವು 60ನೇ ಮೇಳ ನೀತಿಮತಿಯಲ್ಲಿ ಜನ್ಯವಾದ ಷಾಡವರಾಗ. ಗಾಂಧಾರವರ್ಜ್ಯರಾಗವಾದ ಇದರ ಆರೋಹಣ ಅವರೋಹಣಗಳು **ಸ ರಿ ಮ ಪ ದ ನಿ ಸ – ಸ ನಿ ದ ನಿ ಪ ಮ ರಿ ಸ**. ಹಿಂದೆ ಈ ರಾಗದಲ್ಲಿ ದೈವತ ಪ್ರಯೋಗವಿದ್ದರೂ ಸಮಕಾಲೀನವಾಗಿ ಇದು **ಸ ರಿ ಮ ಪ ನಿ ಸ – ಸ ನಿ ಪ ಮ ರೀ ಸ** ಎಂದು ದೈವತವೂ ವರ್ಜ್ಯವಾಗಿದೆ ಎನ್ನುತ್ತಾರೆ, ಶಾಸ್ತ್ರಕಾರರು. ಈ ರಾಗದ ಪ್ರಸಿದ್ಧ ರಚನೆ ತ್ಯಾಗರಾಜವಿರಚಿತ **ಬಂಟುರೀತಿ ಕೊಲವು ಈಯವಯ್ಯ ರಾಮ.** , ಮುತ್ತಯ್ಯಭಾಗವತರ ಪ್ರಸ್ತುತ ಕೃತಿ ಕೃಪಾನಿಧೇಯಲ್ಲಿ ವೇದ–ನಾದ, ಬೃಹದೀಶ–ಹರಿಕೇಶ ಹಾಗೂ ಚಿಟ್ಟೆಸ್ವರದಲ್ಲಿ ದೈವತ ಪ್ರಯೋಗವೂ ಇರುವುದು ಗಮನಾರ್ಹ. ಇದೇ ಹೆಸರಿನ ತಾಳವೊಂದೂ ಅಷ್ಟೋತ್ತರಶತ ತಾಳದ ಪಟ್ಟಿಯಲ್ಲಿ ಕಾಣಬರುತ್ತದೆ.

ಭೀಮಾಯ ನಮಃ

## 31. ಭೀಮಂ ಭಜೇಹಂ ಪಿನಾಕಿನಂ

ರಾಗ – ದೇವಗಾಂಧಾರಿ      ಆದಿತಾಳ

ಭೀಮಂ ಭಜೇಹಂ ಪಿನಾಕಿನಂ।
ಪಾಮರಜನೋದ್ಧಾರಂ ಭಕ್ತಮಂದಾರಂ।
ಸೋಮಶೇಖರಂ ಸುಂದರಂ ವರಂ॥
ಘೋರತರ ಸಂಸಾರ ನಿವಾರಣಂ।
ಮಾರಮಥನಂ ಮುನಿಮಾನಸ ಸದನಂ॥
ನಾರದಕೃತಸ್ತೋತ್ರಂ ರಮ್ಯಗಾತ್ರಂ।
ವಾರಣಮುಖತಾತಂ ವರಂ ಹರಿಕೇಶಂ॥

ಭೀಮಶಂಕರನಾದ ಪಿನಾಕಿ, ಪಾಮರಜನೋದ್ಧಾರ, ಭಕ್ತಮಂದಾರ, ಸೋಮಶೇಖರ, ಸುಂದರಶ್ರೇಷ್ಠ, ಘೋರವಾದ ಸಂಸಾರಸಾಗರದ ಕ್ಲೇಶಗಳನ್ನು ನಿವಾರಿಸುವ, ಕಾಮನನ್ನು ಸಂಹರಿಸಿದ, ಮುನಿಜನರ ಮನಸ್ಸನ್ನೇ ಸದನವಾಗಿ ಹೊಂದಿದ, ನಾರದನಿಂದ ಸ್ತುತಿಸಲ್ಪಟ್ಟ, ರಮ್ಯಗಾತ್ರನಾದ, ಗಜಾನನನ ತಂದೆಯಾದ ಈಶ್ವರನನ್ನು ನಾನು ಭಜಿಸುತ್ತೇನೆ ಎಂದು ಕೃತಿಕರ್ತರು ಈ ಕೃತಿಯಲ್ಲಿ ಹಾಡಿದ್ದಾರೆ. ಅಥರ್ವವೇದದಲ್ಲಿ **ಭೀಮಂ ರಾಜಾನಂ ಉಪಹಂತಾ** ಎಂದು ಘೋಷಿಸಿರುವ ಪದಗಳೂ ಶಿವಪರ್ಯಾಯಗಳೇ ಆಗಿವೆ ಎನ್ನುತ್ತಾರೆ.

ಕೃತಿಕರ್ತರು ಪಾರಿಜಾತಪರ್ವತದಲ್ಲಿ ಭೀಮಾಶಂಕರನೆಂಬ ಹೆಸರಿನಿಂದ ಜ್ಯೋತಿರ್ಲಿಂಗವಾಗಿ ನೆಲೆಸಿರುವ ಈಶ್ವರನನ್ನು ಇಲ್ಲಿ ಸ್ಮರಿಸಿದ್ದಾರೆ. ಭೀಮಾಶಂಕರನಿಗೆ ಸಂಬಂಧಿಸಿದಂತೆ ಕಥೆಯೊಂದು ಶಿವಪುರಾಣದಲ್ಲುಂಟು. ಲಂಕಾಧಿಪತಿ ರಾವಣೇಶ್ವರನ ತಮ್ಮ, ಕುಂಭಕರ್ಣನು ವಿಹಾರಾರ್ಥವಾಗಿ ಪಾರಿಜಾತಪರ್ವತಕ್ಕೆ ಹೋಗಿ ಅಲ್ಲಿ ವನದೇವತೆಯಂತೆ ವಿಹರಿಸುತ್ತಿದ್ದ ಕರ್ಕಟಿಯೊಂದಿಗೆ ದೇಹಸಂಬಂಧ ಬೆಳೆಸಿ, ಭೀಮಾಶಂಕರನೆಂಬ ಪುತ್ರನನ್ನು ಪಡೆದು ಮೃತನಾದನು. ಕೆಲವು ಕಾಲದ ನಂತರ, ಭೀಮಾಶಂಕರನು ತನ್ನ ತಂದೆ ಯಾರೆಂದೂ, ಅವನನ್ನೂ ಮತ್ತು ದೊಡ್ಡಪ್ಪನಾದ ರಾವಣೇಶ್ವರನನ್ನೂ ಶ್ರೀರಾಮನು ದೇವತೆಗಳ ಸಹಾಯ ಪಡೆದು ಸಂಹರಿಸಿದನೆಂದೂ ಕರ್ಕಟಿಯಿಂದ ತಿಳಿದು ಕೋಪಾವಿಷ್ಟನಾಗಿ ದೇವತೆಗಳನ್ನು ನಾಶ ಮಾಡುತ್ತೇನೆಂದು ಶಪಥ ಮಾಡಿದನು. ಅಂತೆಯೇ, ಬ್ರಹ್ಮನನ್ನು ಕುರಿತು ಘೋರ ತಪಸ್ಸು ಮಾಡಿ, ತನಗೆ ಯಾವುದೇ ಆಯುಧಗಳಿಂದಲೂ, ಮರಣವಾಗಬಾರದೆಂಬ ವರವನ್ನು ಪಡೆದನು. ಮುಂದೆ, 'ದೇವತೆಗಳನ್ನು ನಾಶ ಮಾಡುತ್ತೇನೆ' ಎಂಬ ಶಪಥವನ್ನು ಕಾರ್ಯಗತಮಾಡಹೊರಟಾಗ ದೇವತೆಗಳು ಇವನ ಹಾವಳಿಗೆ ಹೆದರಿ, ಪರಶಿವನಲ್ಲಿಗೆ ಬಂದು ಮೊರೆಯಿಟ್ಟರು. ಇತ್ತ ಅದೇ ಪರ್ವತದಡಿಯಲ್ಲಿ ಈಶ್ವರನ ಪರಮಭಕ್ತನಾದ ಕಾಮರೂಪೇಶ್ವರನಿದ್ದನು.

ಇವನನ್ನೂ ಕೊಲ್ಲಲು ಭೀಮಾಶಂಕರನು ಮುಂದಾದಾಗ ಪರಶಿವನು ತನ್ನ ತ್ರಿಶೂಲವನ್ನು ಭೀಮಾಶಂಕರನ ಮೇಲೆ ಪ್ರಯೋಗಿಸಿದನು. ಆದರೆ ಇದು ನಿರರ್ಥಕವಾಯಿತು. ಆಗ ಶಿವನು ತನ್ನ ಹಣೆಗಣ್ಣನ್ನು ತೆರೆದು ಭೀಮಾಶಂಕರನನ್ನು ಸಂಹರಿಸಿದನು. ಇದರಿಂದ ಪುತ್ರಶೋಕಗೊಂಡ ಕರ್ಕಟಿ, ಪರಶಿವನಲ್ಲಿಗೆ ಬಂದು ಗೋಳಾಡಿದಾಗ, ಶಿವನು ಆಕೆಯನ್ನು ಸಮಾಧಾನಪಡಿಸುತ್ತಾ, "ಕರ್ಕಟಿ, ಚಿಂತಿಸಬೇಡ. ನನ್ನ ಹಣೆಗಣ್ಣ ಜ್ಯೋತಿಯಿಂದ ಭೀಮಾಶಂಕರನು ಹತನಾಗಿರುವುದರಿಂದ ನನ್ನ ಸಾಯುಜ್ಯವನ್ನೇ ಸೇರಿದ್ದಾನೆ. ಇನ್ನು ಮುಂದೆ ನೀನೂ ನನ್ನನ್ನೇ ಧ್ಯಾನಿಸು. ನಾನು ಇದೇ ಪಾರಿಜಾತಪರ್ವತದಲ್ಲೇ ಭೀಮಾಶಂಕರವೆಂಬ ಜ್ಯೋತಿರ್ಲಿಂಗವಾಗಿ ನೆಲೆಸಿರುತ್ತೇನೆ. ಈ ಜ್ಯೋತಿರ್ಲಿಂಗವನ್ನು ಭಕ್ತಿಯಿಂದ ಆರಾಧಿಸುವವರಿಗೆ ಸಾಯುಜ್ಯ ಪ್ರಾಪ್ತಿಯಾಗುತ್ತದೆ" ಎಂದು ಕರ್ಕಟಿಗೆ ಸಾಂತ್ವನ ಹೇಳಿದನು.

ಹೀಗಾಗಿ ಮುತ್ತಯ್ಯ ಭಾಗವತರು, ಈ ಕೃತಿಯಲ್ಲಿ ಭೀಮೇಶ್ವರನನ್ನು ಭಜಿಸಿರಬಹುದೆನಿಸುತ್ತದೆ. ಪಾಮರ ಜನೋದ್ಧಾರ ಎಂಬಲ್ಲಿ ಅಜ್ಞ, ಕುಂಭಕರ್ಣನ ಪುತ್ರ ಭೀಮಾಶಂಕರನಿಗೆ ಸಾಯುಜ್ಯ ನೀಡಿ ಉದ್ಧರಿಸಿದ, ಭಕ್ತಜನಮಂದಾರಂ ಎಂಬಲ್ಲಿ ತನ್ನ ಭಕ್ತನಾಗಿದ್ದ ಕಾಮರೂಪೇಶ್ವರನನ್ನು ರಕ್ಷಿಸಿದ ಅಂಶಗಳು ತಿಳಿಯಬರುತ್ತದೆ.

ಪ್ರಸ್ತುತ ಕೃತಿಯು ದೇವಗಾಂಧಾರಿರಾಗದಲ್ಲಿ ನಿರೂಪಿತವಾಗಿದೆ. 29ನೇ ಮೇಳದಲ್ಲಿ ಜನ್ಯವಾದ ಭಾಷಾಂಗರಾಗವಿದು. ರಾಗದ ಆರೋಹ ಅವರೋಹಗಳು **ಸ ರಿ ಮ ಪ ದ ಸ** ಅಥವಾ **ಸ ರಿ ಮ ಪ ದ ನಿ ಸ – ಸ ನಿ ದಾ ಪ ಮ ಗಾ ರೀ ಸ. ಮಪದಾ ನಿಸರೀ, ಸರಿಗಸರೀ, ರಿಸರಿಗಮಾಗರೀ, ಸನಿದನೀದಪ** – ಇವು ರಾಗಚ್ಛಾಯಾ ಸಂಚಾರಗಳು. ಅನ್ಯಸ್ವರವಾದ ಕೈಶಿಕಿ ನಿಷಾದವು **ಪದನಿದ ಮಪದಪ** ಸಂಚಾರದಲ್ಲಿ ಬರುತ್ತದೆ. ಚೌಕಕಾಲಕ್ಕೆ ಹೆಚ್ಚು ಹೊಂದುವ ಈ ರಾಗ, ಗಮಕವರೀಕ ರಕ್ತಿರಾಗ. ಪುರಾತನವೂ ಸಾರ್ವಕಾಲಿಕವೂ ಆದ ರಾಗ. ಈ ರಾಗದ ಮತ್ತೊಂದು ವಿಶೇಷವೆಂದರೆ, ತ್ಯಾಗರಾಜರು ಈ ರಾಗವನ್ನು ಎಂಟು ದಿನಗಳ ಕಾಲ ಹಾಡಿದರೆಂದು ತಿಳಿದುಬರುತ್ತದೆ. ರಾಗದ ಕೆಲವು ಜನಪ್ರಿಯ ರಚನೆಗಳೆಂದರೆ, **ಕ್ಷೀರಸಾಗರನಯನ, ವಿನರಾದ ನಾ ಮನವಿ, ಕರುಣಾಸಮುದ್ರ, ತುಳಸಮ್ಮ ಮಾ ಇಂಟನೆಲಕೊನ್ನವಮ್ಮ, ನಾ ಮೊರಾಲಗಿಂಪವೇಮಿ, ಕ್ಷಿತಿಜಾರಮಣಂ, ಸಾಮಿಕಿ ಸರಿ, ನೀ ಸಹಾಯಮು ಲೇನಿ** ಮುಂತಾದುವು. ತ್ಯಾಗರಾಜವಿರಚಿತ **ಸೀತಾವರಸಂಗೀತ ಜ್ಞಾನಮು, ಧಾತ ರಾಯವಲೆರಾ** ಕೃತಿಯು ವಿಶೇಷವಾಗಿ ಸಂಗೀತಜ್ಞರ ಗಮನ ಸೆಳೆಯುತ್ತದೆ. ಏಕೆಂದರೆ ಸಂಗೀತಜ್ಞಾನ ಪ್ರಾಪ್ತವಾಗಬೇಕೆಂದರೆ ಭಗವತ್ಕೃಪೆ ಅತ್ಯಗತ್ಯ ಎಂಬ ಸತ್ಯವಾಕ್ಯವನ್ನು ಅವರು ಈ ಕೃತಿಯ ಮೊದಲ ಸಾಲಿನಲ್ಲೇ ಹೇಳಿದ್ದಾರೆ.

ಪರಶುಹಸ್ತಾಯ ನಮಃ

## 32. ಪರಶುಹಸ್ತಾಯ ಪಾಲಯಮಾಂ

ರಾಗ – ನವರಸಕನ್ನಡ    ರೂಪಕತಾಳ

ಪರಶುಹಸ್ತಾಯ ಪಾಲಯಮಾಂ ಪಾರ್ವತೀಶ॥
ವರಮೃಗಧರ ಗಿರಿನಿಲಯಾ ಮಹಾದೇವ ವರದಾಯಕ॥
ಕಾಲಕಾಲ ಕಪಾಲಿನ್ ಕರುಣಾಕರ ಕಾಮಿತದ।
ಫಾಲಲೋಚನ ಭಕ್ತಹಿತ ನೀಲಕಂಠ ಹರಿಕೇಶ॥

ಕೊಡಲಿಯನ್ನು ಕೈಯಲ್ಲಿ ಹಿಡಿದಿರುವ ಪಾರ್ವತೀಶನಲ್ಲಿ ಕೃತಿಕರ್ತರು ನನ್ನನ್ನು ಪಾಲಿಸು ಎಂದು ಪ್ರಾರ್ಥಿಸಿದ್ದಾರೆ. ಶಿವನು ಮೃಗಧರ, ಮಹಾದೇವ, ವರದಾಯಕ, ಕಪಾಲಿ, ಕರುಣಾಕರ, ಅಭೀಷ್ಟವರದ, ಫಾಲಲೋಚನ, ಭಕ್ತಹಿತನು. ನೀಲಕಂಠನಲ್ಲಿ, ಕಾಲನಿಗೂ ಕಾಲನಾದ ಪಾರ್ವತೀಶನಲ್ಲಿ ತಮ್ಮ ರಕ್ಷಣೆಗಾಗಿ ಅವರು ಪ್ರಾರ್ಥಿಸಿದ್ದಾರೆ. ಈಶ್ವರನನ್ನು ಪರಶುಹಸ್ತಾಯ ಎಂದು ಕರೆದಿರುವುದು ಶಿವಾಷ್ಟೋತ್ತರಶತದಲ್ಲೂ 32ನೇ ನಾಮವಾಗಿರುವುದರಿಂದ ವಾಗ್ಗೇಯಕಾರರೂ ಈ ಕೃತಿಯನ್ನು ಅದೇ ನಾಮದಿಂದಲೇ ಆರಂಭಿಸಿದ್ದಾರೆ.

ಪ್ರಸ್ತುತ ಕೃತಿಯು ನವರಸಕನ್ನಡ ರಾಗದಲ್ಲಿ ರಚಿತವಾಗಿದೆ. ಇದು 28ನೇ ಮೇಳದಲ್ಲಿ ಜನ್ಯವಾಗಿ **ಸ ಗ ಮ ಪ ಸ – ಸ ನಿ ದ ಮ ಗಾ ರಿ ಸ** ಎಂಬ ಆರೋಹಾವರೋಹಗಳನ್ನು ಹೊಂದಿದೆ. ಸ್ವರಾಂತರ ಷಾಡವರಾಗಕ್ಕೆ ಇದೊಂದು ಉದಾಹರಣೆ. ಎಂದರೆ ಆರೋಹದಲ್ಲಿ ನಾಲ್ಕು ಸ್ವರ, ಅವರೋಹದಲ್ಲಿ ಆರು ಸ್ವರಗಳಿವೆ. ಭಕ್ತಿರಸ ಪ್ರಧಾನವಾದ ಉಪಾಂಗರಾಗವಿದು. ತ್ಯಾಗರಾಜರಿಂದ ಮೊದಲಿಗೆ ಪ್ರಯೋಗಗೊಂಡ ರಾಗವಿದೆಂದು ಹೇಳುತ್ತಾರೆ. ತ್ಯಾಗರಾಜರು ಈ ರಾಗದಲ್ಲಿ **ನಿನ್ನು ವಿನಾ ನಾಮದೆಂದು ನಿಲುವದೇ, ಪಲುಕು ಕಂಡಚಕ್ಕರ** ಎಂಬೆರಡು ಕೃತಿಗಳನ್ನೂ, ರಾಂನಾಡು ಶ್ರೀನಿವಾಸ ಅಯ್ಯಂಗಾರ್ಯರು **ನೀ ಪಾದಮುಲೇ ಗತಿಯನಿ,** ಸ್ವಾತಿತಿರುನಾಳ್ ಮಹಾರಾಜರು **ವಂದೇ ಸದಾ ಪದ್ಮನಾಭಂ,** ಪಾಪನಾಶಂ ಶಿವನ್ **ನಾನ್ ಒರು ವಿಳೆಯಾಟ್ಟು ಬೊಮ್ಮೆಯಾ,** ಮುತ್ತಯ್ಯಭಾಗವತರು **ಪರಶುಹಸ್ತಾಯ ಮತ್ತು ದುರ್ಗಾದೇವಿ** ಕೃತಿಗಳನ್ನು ರಚಿಸಿದ್ದಾರೆ. ಪ್ರಸ್ತುತ, ಪರಶುಹಸ್ತಾಯ ಕೃತಿಯು ಚಿಕ್ಕದಾದ ಚೊಕ್ಕವಾದ ಚಿಟ್ಟೆಸ್ವರವನ್ನು ಹೊಂದಿದೆ.

ಮೃಗಪಾಣಯೇ ನಮಃ

## 33. ಮೃಗಪಾಣೇ ಮೃತ್ಯುಂಜಯ

ರಾಗ – ಭೈರವಿ ರೂಪಕತಾಳ

ಮೃಗಪಾಣೇ ಮೃತ್ಯುಂಜಯ ವೇದರೂಪ ನಮೋಸ್ತುತೇ।
ಖಗವಾಹನಾದಿವಂದಿತ ಕಾಮಿತಫಲದಾಯಕ ಶಂಕರ॥
ನಂದಿವಾಹನ ನಾಗಭೂಷಣ ಇಂದುಶೇಖರ ಇಭಚರ್ಮಾಂಬರ।
ಕುಂದರದನ ಕುಬೇರಪ್ರಿಯ ಸುಂದರ ಹರಿಕೇಶ ಈಶ॥

ಮುತ್ತಯ್ಯಭಾಗವತರು ಮೃಗಪಾಣಿ, ಮೃತ್ಯುಂಜಯ, ವೇದರೂಪನಿಗೆ ನಮಸ್ಕರಿಸುತ್ತಿದ್ದಾರೆ. ಬ್ರಹ್ಮನಿಂದ ವಂದಿಸಲ್ಪಟ್ಟ, ಕಾಮಿತಫಲದಾಯಕ ಶಂಕರ, ನಂದಿಯನ್ನೆ ವಾಹನವಾಗುಳ್ಳ ನಾಗಭೂಷಣ, ಚಂದ್ರಶೇಖರ, ಗಜಚರ್ಮಾಂಬರ, ಕುಬೇರಪ್ರಿಯನನ್ನು ನಮಸ್ಕಾರಗಳೊಂದಿಗೆ ಅವರು ಸ್ಮರಿಸುತ್ತಿದ್ದಾರೆ. ಕಂಠದಲ್ಲಿ ಧರಿಸಿದ ಕಾಲಕೂಟ ಹಾಗೂ ನಾಗಶೇಷ ಇವು ಶಿವನ ಮೃತ್ಯುಂಜಯ ರೂಪವನ್ನು ಸ್ಪಷ್ಟಪಡಿಸಿವೆ. ಆನೆಯ ಚರ್ಮವನ್ನು ತಾನು ಧರಿಸಿದ್ದರಿಂದ ಈಶ್ವರನು ಗಜಚರ್ಮಾಂಬರಧಾರಿ ಎನಿಸಿಕೊಂಡಿದ್ದಾನೆ.

ಧನಾಧಿಪತಿಯಾದ ಕುಬೇರನಿಗೂ ಶಿವನು ಪ್ರಿಯನಾದ ಹಿನ್ನೆಲೆ ಹೀಗಿದೆ. ವೈಶ್ರವಣನು ಶಿವನನ್ನು ಕುರಿತು ಘೋರ ತಪಸ್ಸನ್ನು ಮಾಡುವಾಗ ಆತನ ತಪೋಭಂಗಕ್ಕೆ ಅದೆಷ್ಟೋ ವಿಘ್ನಗಳು ಬಂದವು. ಆದರೆ ವೈಶ್ರವಣನು ತನ್ನ ನಿರ್ಧಾರವನ್ನು ಬದಲಿಸದೆ ನಿಶ್ಚಲತೆಯಿಂದ ತಪಸ್ಸು ಮಾಡಿ ಶಿವಪಾರ್ವತಿಯರನ್ನು ಪ್ರತ್ಯಕ್ಷ ಮಾಡಿಕೊಂಡನು. ಆಗ ಶಿವನ ಪ್ರಕಾಶ ಅತ್ಯುಜ್ವಲವಾಗಿದ್ದು ಅದರಿಂದಾಗಿ ವೈಶ್ರವಣನ ಕಣ್ಣುಗಳು

ಕುರುಡಾಗಿಹೋಯಿತು. ಆಗ ಶಿವನು ವೈಶ್ರವಣನಿಗೆ ದೃಷ್ಟಿ ನೀಡಿದ್ದಲ್ಲದೇ ಅಷ್ಟದಿಕ್ಪಾಲಕರಲ್ಲೊಬ್ಬನಾದ ಕುಬೇರನಾಗುವಂತೆ ಅನುಗ್ರಹಿಸಿದನು. ಕುಬೇರನು ಪರಶಿವನ ಅನುಗ್ರಹದಂತೆ ಧನಾಧಿಪತಿಯಾದ ನಂತರ ಒಂದು ಪ್ರತ್ಯೇಕ ಕೈಲಾಸವನ್ನೇ ಸೃಷ್ಟಿಮಾಡಿಕೊಂಡನು. ಹೀಗೆ ಪರಮೇಶ್ವರನು ಕುಬೇರನನ್ನು ಅನುಗ್ರಹಿಸಿ ಕುಬೇರಪ್ರಿಯನೆನಿಸಿದನು.

ಮೃಗಪಾಣೇ ಮೃತ್ಯುಂಜಯ ಎಂದಾರಂಭವಾಗಿರುವ ಈ ಕೃತಿಯು 20ನೇ ಮೇಳದಲ್ಲಿ ಜನ್ಯವಾದ ಭೈರವಿರಾಗದಲ್ಲಿ ಸಂಯೋಜಿತವಾಗಿದೆ. ಭೈರವಿಯು ಸುಮಾರು 6–7–8ನೇ ಶತಮಾನದಲ್ಲೇ ಭಾಷಾಂಗ ರೂಪದಲ್ಲೇ ಪ್ರಯೋಗವಿದ್ದಿತೆಂದು ಹೇಳುತ್ತಾರೆ. ಭೈರವಿ ರಾಗದ ಆರೋಹಾವರೋಹಗಳು **ಸ ರಿ ಗ ಮ ಪ ದ ನಿ ಸ – ಸ ನಿ ದ ಪ ಮ ಗ ರಿ ಸ.** ವಿಶಿಷ್ಟವಾದ ಜನ್ಯರಾಗವಿದು. ಏಕೆಂದರೆ ಸಪ್ತಸ್ವರಗಳೂ ಕ್ರಮದಲ್ಲಿಯೇ ಪ್ರಯೋಗವಿದ್ದರೂ ಇದೊಂದು ಜನ್ಯರಾಗ ಎನಿಸಿದೆ. ಸಾಧಾರಣವಾಗಿ ಕ್ರಮವಾದ ಸಪ್ತಸ್ವರಗಳ ಜೋಡಣೆ, **ರಿಗಮದನಿ** ಸ್ವರಗಳು ಆರೋಹಾವರೋಹಗಳೆರಡರಲ್ಲೂ ಒಂದೇ ಪ್ರಭೇಧಗಳನ್ನುಳ್ಳದ್ದು ಮೇಳ ಎನಿಸುತ್ತದೆ. ಆದರೆ ಭೈರವಿಯಲ್ಲಿ ಕ್ರಮಶ್ರೇಣಿಯಿದ್ದರೂ ಅನ್ಯಸ್ವರದ ಅಳವಡಿಕೆ ಸ್ಕೇಲ್‌ನಲ್ಲಿಯೇ ಆಳವಟ್ಟಿದೆ. ಎಂದರೆ ರಾಗದ ಆರೋಹದಲ್ಲಿ ಚತುಶ್ರುತಿದೈವತವೂ ಅವರೋಹದಲ್ಲಿ ಶುದ್ಧದೈವತವೂ ಇದೆ. ಹೀಗಾಗಿ ಇದು ಎರಡೂ ದೈವತಗಳನ್ನು ಬಳಸುವುದರಿಂದ ಏಕಾನ್ಯಸ್ವರ ಭಾಷಾಂಗ ರಾಗವೆನಿಸಿದೆ. ಆದರೆ ಕೆಲವೊಮ್ಮೆ ಆರೋಹಣವನ್ನು ಕ್ರಮವಾಗಿಲ್ಲದೆ **ಸಗರಿಗಮಪದನಿಸ** ಎಂದೂ ಪ್ರಯೋಗಿಸುವುದುಂಟು. ಬಹುರಸಪ್ರಧಾನವಾದ, ತ್ರಿಸ್ಥಾಯಿಯಲ್ಲೂ ವ್ಯಾಪ್ತಿಯುಳ್ಳ, ಸಾರ್ವಕಾಲಿಕವಾದ, ವಿಸ್ತೃತ ಆಲಾಪನೆಗೆ ಅವಕಾಶವಿರುವ ಜನ್ಯರಾಗವಿದು. ಭೈರವಿ ರಾಗಾಲಾಪನೆಯಲ್ಲೇ ಸಿದ್ಧಹಸ್ತರಾಗಿದ್ದ ಬೆಂಗಳೂರು ಕೆಂಪೇಗೌಡರು ಭೈರವೀ ಕೆಂಪೇಗೌಡರೆಂದೇ ಪ್ರಸಿದ್ಧರಾಗಿದ್ದರೆಂಬುದನ್ನು ಇಲ್ಲಿ ಸ್ಮರಿಸಬಹುದು.

ಭೈರವಿರಾಗದಲ್ಲಿ ಗೀತೆ, ಸ್ವರಜತಿ, ವರ್ಣಗಳು, ಕೃತಿಗಳು, ಪದ, ತಿಲ್ಲಾನಗಳಂಥ ಎಲ್ಲ ರಚನೆಗಳನ್ನೂ ಕಾಣಬಹುದು. ಅವುಗಳಲ್ಲಿ ಶ್ಯಾಮಾಶಾಸ್ತ್ರಿವಿರಚಿತ **ಕಾಮಾಕ್ಷಿ** ಸ್ವರಜತಿಯು ಅತ್ಯಂತ ವಿಶಿಷ್ಟವಾಗಿದೆ. ಸ್ವರಜತಿಯು ಸಾಧಾರಣವಾಗಿ ಅಭ್ಯಾಸಗಾನ ವಿಭಾಗಕ್ಕೆ ಸೇರುವುದಾದರೂ ಶ್ಯಾಮಾಶಾಸ್ತ್ರಿಗಳು ರಚಿಸಿರುವ **ಕಾಮಾಕ್ಷಿ** ಸ್ವರಜತಿಯು ಅತ್ಯಂತ ಪ್ರೌಢವಾಗಿದ್ದು ಸಭಾಗಾನಯೋಗ್ಯವೆನಿಸಿದೆ. ಅಂತೆಯೇ ಆದಿಪ್ಪಯ್ಯನವರ **ವೀರಿಬೋಣಿ** ಅಟ್ಟತಾಳದ ವರ್ಣವೂ ವಿಶಿಷ್ಟವೇ ಆಗಿದೆ. ತಾನವರ್ಣ ರಚನೆಯಲ್ಲಿ ಇವರು ತಾನವರ್ಣಮಾರ್ಗದರ್ಶಿ ಎಂದೇ ಕರೆಯಲ್ಪಟ್ಟಿದ್ದಾರೆ ಎಂಬುದನ್ನಿಲ್ಲಿ ಸ್ಮರಿಸಬಹುದು.

ಭೈರವಿರಾಗದ ಇನ್ನು ಕೆಲವು ರಚನೆಗಳೆಂದರೆ, **ಶ್ರೀರಾಮಚಂದ್ರ**(ಗೀತೆ), **ಕೊಲುವೈಯುನ್ನಾಡೆ, ಉಪಚಾರಮು, ಚೇತುಲಾರ, ತನಯುನಿಬ್ರೋವ, ರಕ್ಷಪೆಟ್ಟರೇ, ಚಿಂತಯಮಾ, ಸರಿ ಎವ್ವರಮ್ಮ, ನೀ ಪಾದಮುಲೇ, ಬಾಲಗೋಪಾಲಂ, ಇಕನನ್ನು ಬ್ರೋವಕುನ್ನ** ಮುಂತಾದುವು. ಶ್ಲೋಕ ಪದ್ಯಗಳ ಹಾಡಿಕೆಯಲ್ಲೂ ಸಂಗೀತ ನಾಟಕಗಳಲ್ಲೂ ಈ ರಾಗ ಪ್ರಯೋಗವಾಗುತ್ತವೆ.

ಪ್ರಸ್ತುತ, ಮೃಗಪಾಣೇ ಕೃತಿಯು, ಶಿವಾಷ್ಟೋತ್ತರಶತದ 33ನೇ ನಾಮದಿಂದಲೇ ಆರಂಭವಾಗಿದೆ. ಭೈರವಿರಾಗದ ಸ್ವರೂಪನನ್ನು ಮನಮುಟ್ಟುವಂತೆ ತಿಳಿಸುವ ಚಿಟ್ಟೆಸ್ವರವನ್ನೂ ಹೊಂದಿದೆ.

ಜಟಾಧರಾಯ ನಮಃ

## 34. ಶ್ರೀಜಟಾಧರಾ ಶಿವಶಂಕರ

**ರಾಗ – ಸಿಂಧುಮಂದಾರಿ** ಆದಿತಾಳ

ಶ್ರೀಜಟಾಧರ ಶಿವಶಂಕರ ಶ್ರಿತಜನಪರಿಪಾಲ।
ರಾಜಕಲಾಲಂಕಾರ ರಮಣೀಯದೇಹ ವೃಷಭವಾಹ॥
ಕರಧೃತಶೂಲಕಾಲಕಾಲ ಕಂದರ್ಪನಿಗ್ರಹ ಪುರಹರ।
ಪರಮೇಶ್ವರ ಪಾರ್ವತೀಲೋಲ ಹರಿಕೇಶ ಮಾಮವ ಪರೇಶ॥

ಕೃತಿಕರ್ತರು ಈ ಕೃತಿಯಲ್ಲಿ ಆಶ್ರಿತಜನರನ್ನು ರಕ್ಷಿಸುವ ಶಿವಶಂಕರನು ತಮ್ಮನ್ನು ಎಂದಿಗೂ ಕೈ ಬಿಡಬಾರದೆಂದು ಪ್ರಾರ್ಥಿಸಿದ್ದಾರೆ. ಇಲ್ಲಿನ ಶಿವನು ಅವರ ಪ್ರಕಾರ ಜಟಾಧರನೂ, ಆಶ್ರಿತಜನರಕ್ಷಕನೂ, ರಾಜವೇಷಧರನೂ, ವೃಷಭವಾಹನನೂ, ಶೂಲವನ್ನು ಕೈಯಲ್ಲಿ ಹಿಡಿದವನೂ, ಅಂತಕನಿಗೇ ಅಂತಕನೂ, ಮನ್ಮಥನಿಗ್ರಹನೂ, ಪಾರ್ವತೀಲೋಲನೂ ಆಗಿದ್ದಲ್ಲದೇ ಈತ ಪರೇಶನೂ ಆಗಿದ್ದಾನೆ.

ಶಿವನು ಎಂದೆಂದೂ ಮಂಗಳಮೂರ್ತಿ ಹಾಗೂ ಕಲ್ಯಾಣ ಗುಣಗಣ. ವೃಷಭರೂಪವಾದ ಧರ್ಮವೇ ಆ ಶಿವನ ವಾಹನ, ಹೀಗಾಗಿ ಶಿವಶಂಕರನು ವೃಷಭವಾಹ. ಶಿವನ ಜಟೆಯಾದರೋ ಜ್ಞಾನಾರಣ್ಯದ ಸೂಚಕ. ಅಲ್ಲದೆ, ಇಂದ್ರಿಯಗಳ ಯಜಮಾನನೆಂಬುದಕ್ಕೆ, ಹೃಷಿಕೇಶನೆಂಬುದಕ್ಕೆ, ಈ ಜಟೆಯೂ ಒಂದು ಗುರುತು. ಈ ಜಟೆಯಿಂದ ಹರಿಯುವ ಗಂಗೆ ಶಾಂತಿ, ಪಾವಿತ್ರ್ಯ, ಮೋಕ್ಷ ಮೊದಲಾದ ಸದ್ಗುಣಗಳ ದ್ಯೋತಕ. ಕುಂಡಲಿನೀಶಕ್ತಿಯು ಜಾಗೃತಗೊಂಡಾಗ ಶಿವನ ಶರೀರದಲ್ಲಿ ಹೆಚ್ಚಿನ ಗೊಂದಲಗಳಾಗುವುದು. ಆದರೆ ಶಿವನ ಗಂಗಾಧಾರಣೆಯಿಂದ ಗೊಂದಲದ ಸ್ಥಿತಿ ಶಿವನಿಗೆಂದೂ ಬರಲಾರದೆಂಬುದನ್ನು ಇದು ಸೂಚಿಸುತ್ತದೆ. ಸಹಸ್ರದಲದಲ್ಲಿ ಉತ್ಪನ್ನವಾಗುವ ಈ ಗಂಗಾಧಾರೆಯನ್ನು ಶಿವನು ಮೊದಲೇ ಶಿರಸ್ಸಿನಲ್ಲಿ ಧರಿಸಿರುವುದು ಅಧ್ಯಾತ್ಮಿಕ ಗಂಗಾಪ್ರವಾಹ ಎನಿಸುವುದು. ಗಂಗಾಧರ ಎಂಬ ಶಿವನ ಪರ್ಯಾಯಪದಕ್ಕೆ ಇದು ವೈಜ್ಞಾನಿಕವಾದ ಅರ್ಥ ಎಂಬುದು ವಿದ್ವಾಂಸರ ಅಭಿಮತ.

ಪ್ರಸ್ತುತ, ಶ್ರೀಜಟಾಧರ ಎಂಬ ಈ ಕೃತಿಯಲ್ಲಿ ಮುತ್ತಯ್ಯಭಾಗವತರು ಶಿವನ ಸುಂದರ ದೇಹವೆಂಬ ಕಲಾತ್ಮಕ ಅಂಶವನ್ನೂ, ಆಶ್ರಿತರಕ್ಷಕನಾಗುವ ಸೌಲಭ್ಯಗುಣವನ್ನೂ ಪ್ರಸ್ತಾಪಿಸಿದ್ದಾರೆ. ಕೃತಿಯು ಸಿಂಧುಮಂದಾರಿ ರಾಗದಲ್ಲಿ ರಚಿತವಾಗಿದೆ. ಈ ರಾಗವು 29ನೇ ಮೇಳದಲ್ಲಿ ಜನ್ಯವಾದ ಔಡವಸಂಪೂರ್ಣರಾಗ. ಆರೋಹ ಅವರೋಹಗಳು **ಸ ರಿ ಗ ಮ ಪ ಸ – ಸ ನಿ ದ ಪ ಗ ಮ ದ ಪ ಮ ರಿ ಸ.** ಅಷ್ಟೇನೂ ಪ್ರಸಿದ್ಧವಲ್ಲದ ಈ ರಾಗದಲ್ಲಿ ರಚನೆಗಳು ವಿರಳ. ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ವಿರಚಿತ **ಕರುಣಿಂಚುಟಕು ಇದಿ ಸಮಯ** ಎಂಬ ರಚನೆಯೊಂದು ಈ ರಾಗದಲ್ಲಿದೆ.

ಕೈಲಾಸವಾಸಿನೇ ನಮಃ

## 35. ಕೈಲಾಸವಾಸಂ ಕಮನೀಯ ಭಾಸಂ

ರಾಗ – ಸಿಂಧುರಾಮಕ್ರಿಯಾ ಆದಿತಾಳ

**ಕೈಲಾಸವಾಸಂ ಕಮನೀಯ ಭಾಸಂ।**
**ಬಾಲೇಂದು ಭೂಷಂ ಭಕ್ತತೋಷಂ ಪರಮದಯಾಕರಂ ಪರಮೇಶ್ವರಂ॥**
**ಗಜಮುಖತಾತಂ ಕಿನ್ನರಗೀತಂ ನಿಜಗುಣಮೂರ್ತಿಂ ನಿರ್ಮಲಕೀರ್ತಿಂ।**
**ಅಜಮುಖವಂದಿತಂ ಹರಿಕೇಶಮೂರ್ತಿಂ ಭಜಾಮಿಸತತಂ ಪಾರ್ವತೀಸಹಿತಂ॥**

ಪಾರ್ವತೀಸಹಿತನಾದ ಪರಮದಯಾಕರ ಪರಮೇಶ್ವರನನ್ನು ಅನವರತವೂ ಭಜಿಸುವುದಾಗಿ ಮುತ್ತಯ್ಯಭಾಗವತರು ಪ್ರಸ್ತುತ ಕೃತಿಯಲ್ಲಿ ಹಾಡಿದ್ದಾರೆ. ಪಾರ್ವತೀದೇವಿಯು ಮೂರುಕಾಲಗಳಲ್ಲಿಯೂ ಶಿವಾಷ್ಟೋತ್ತರವನ್ನು ಜಪಿಸಿ ಶಿವನ ಅರ್ಧಾಂಗವನ್ನು ಪಡೆದಳೆಂದು ಸ್ಕಾಂದ ಪುರಾಣದಲ್ಲಿ ವರ್ಣಿತವಾಗಿದೆ. ಅದಾಗಿ ಈಶ್ವರನು ಅರ್ಧನಾರೀಶ್ವರನೆನಿಸಿದ್ದಾನೆ. ಸಂಗೀತ ಚರಿತ್ರೆಯ ಸುವರ್ಣಯುಗದಲ್ಲಿದ್ದ ಮುತ್ತುಸ್ವಾಮಿದೀಕ್ಷಿತರಿಂದ ರಚಿತವಾದ **ಅರ್ಧನಾರೀಶ್ವರಂ ಆರಾಧಯಾಮಿ ಸತತಂ (ಕುಮುದಕ್ರಿಯಾರಾಗ)** ಕೃತಿ ಇಲ್ಲಿ ನೆನಪಿಗೆ ಬರುತ್ತದೆ. ಶಿವನ ಈ ರೂಪದಲ್ಲಿ ಅರ್ಧಭಾಗ ಸರ್ವಶಕ್ತತೆಗೆ ಪ್ರತೀಕವಾದರೆ ಇನ್ನರ್ಧಭಾಗ ದಯೆಯ ಪ್ರತೀಕ. ದಯಾಪ್ರತೀಕಳಾದ ದೇವಿ ಸಹಜವಾದ ತನ್ನ ದಯಾಗುಣದಿಂದ ಶಿವನಲ್ಲಿ ಶಿಫಾರಸು ಮಾಡುವುದರಿಂದ ಸರ್ವಶಕ್ತ ಶಿವನು ಸದ್ಭಕ್ತಕೋಟಿಯನ್ನು ಸಂರಕ್ಷಿಸುತ್ತಾನೆಂಬುದು ನಂಬುಗೆ. ಇಲ್ಲಿ ದಯೆಯ ಔನ್ನತ್ಯ ಎದ್ದು ಕಾಣುತ್ತದೆ. ಈ ಅಂಶವನ್ನು ತ್ಯಾಗರಾಜರಂತೂ **ಮಾ ಜಾನಕೀ ಚೈ ಪಟ್ಟಗ** ಎಂಬ ಕೃತಿಯೊಂದರಲ್ಲಿ ಸ್ವಾರಸ್ಯಕರವಾಗಿ ಹಾಡಿರುವುದುಂಟು. ಅವರು ಈ ಕೃತಿಯಲ್ಲಿ ದಯೆಯ ಪ್ರತಿರೂಪಳಾದ ಸೀತಾಮಾತೆ ನಿನ್ನ ಕೈ ಹಿಡಿದುದರಿಂದಲೇ ನೀನು ಮಹಾರಾಜನೆನಿಸಿದೆ, ರಾವಣಾರಿಯಾಗಿ ರಾವಣನನ್ನು ಕೊಂದು ಪೂಜ್ಯನೆಂದೆನಿಸಿದೆ ಎಂದು ಶ್ರೀರಾಮನಿಗೆ ಹೇಳಿದ್ದಾರೆ. ಎಂದರೆ ಶ್ರೀರಾಮನಿಗೆ ರಾವಣಾರಿ ಎಂಬ ಕೀರ್ತಿಯುಂಟಾದುದಾದರೂ ಸೀತಾಮಾತೆಯಿಂದಲೇ ಎಂಬ ಈ ಅಂಶ ದೇವಿಯ ಔನ್ನತ್ಯವನ್ನು ತಿಳಿಸುತ್ತದೆ. ದೇವನು ಅತ್ಯಂತ ಶಕ್ತನೂ, ದಯಾಪರನೂ ಆಗಿರಲು ದೇವಿಯೇ ಕಾರಣ ಎಂಬ ಈ ಹಿನ್ನೆಲೆಯಲ್ಲೇ ಪ್ರಸ್ತುತ ಮುತ್ತಯ್ಯಭಾಗವತರು ಪಾರ್ವತೀಸಹಿತನಾದ ಪರಮೇಶ್ವರನನ್ನು ಈ ಕೃತಿಯಲ್ಲಿ ಭಜಿಸಿದ್ದಾರೆ. ಕೈಲಾಸವಾಸನೂ, ಕಮನೀಯನೂ, ಬಾಲಚಂದ್ರನಿಂದ ಅಲಂಕೃತನಾದವನೂ, ಗಣಪತಿಯ ತಂದೆಯೂ, ಕಿನ್ನರರಿಂದ ಸ್ತುತಿಸಲ್ಪಟ್ಟವನೂ, ನಿಜಗುಣಮೂರ್ತಿಯೂ, ನಿರ್ಮಲಕೀರ್ತಿಯೂ, ಬ್ರಹ್ಮವಂದಿತನೂ ಆದ ಈಶ್ವರನ ಪ್ರಸ್ತಾಪವಿಲ್ಲಿದೆ.

ಕೈಲಾಸವಾಸಂ ಎಂದಾರಂಭವಾಗುವ ಈ ಕೃತಿಯು ಸಿಂಧುರಾಮಕ್ರಿಯಾ ಎಂಬ ರಾಗದಲ್ಲಿ ನಿಬದ್ಧವಾಗಿದೆ. 15ನೇ ಮೇಳದಲ್ಲಿ ಜನ್ಯವಾದ ಸಿಂಧುರಾಮಕ್ರಿಯಾ **ಸ ಗ ಮ ಪ ದ ನಿ ಸ – ಸ ನಿ ಪ ದ ಪ ಮ ಗ ಸ.** ಎಂಬ ಆರೋಹಾವರೋಹಗಳನ್ನು ಹೊಂದಿದೆ. **ಸ ಗ ಮ ಪ ದ ನಿ ಸ – ಸ ನಿ ಪ ದ ಪ**

**ಮ ಗ ರಿ ಗ ಸ** ಎಂಬುದಾಗಿಯೂ ಹೇಳುವುದುಂಟು. ಉಪಾಂಗರಾಗ. ಸಾರ್ವಕಾಲಿಕವಾದ ಈ ರಾಗದಲ್ಲಿ ಅಷ್ಟಾಗಿ ರಚನೆಗಳಿಲ್ಲ. ತ್ಯಾಗರಾಜರ **ದೇವಾಧಿದೇವ ಸದಾಶಿವ ಮತ್ತು ಸುಧಾಮಾಧುರ್ಯ** ಎಂಬೆರಡು ರಚನೆಗಳು ಈ ರಾಗದಲ್ಲಿದೆ. ಮುತ್ತುಸ್ವಾಮಿದೀಕ್ಷಿತರೂ ಇದೇ ಹೆಸರಿನ ರಾಗವನ್ನು ಬಳಸಿರುವರಾದರೂ ಅದು 45ನೇ ಮೇಳದಲ್ಲಿ ಜನ್ಯವಾಗಿ ಪ್ರತಿಮಧ್ಯಮ ರಾಗವಾಗಿದೆ.

ಕವಚಿನೇ ನಮಃ

## 36. ದೇವಂ ಕವಚಿನಂ ದಿಗಂಬರಂ ವಂದೇ

ರಾಗ – ಬಂಗಾಳ ಆದಿತಾಳ

**ದೇವಂ ಕವಚಿನಂ ದಿಗಂಬರಂ ವಂದೇ॥**
**ಭಾವಿತಮೂಲಂ ಭಕ್ತಪಾಲಂ ಪಾರ್ವತೀಲೋಲಂ ಪರಮದಯಾಳುಂ॥**
**ಗುಣಾತೀತಂ ಗುರುಗುಹತಾತಂ ಕುಬೇರಮಿತ್ರಂ ಕೋಮಳಗಾತ್ರಂ।**
**ಫಣಿಭೂಷಣಂ ಪಾರ್ವತೀಶಂ ಗಣಾಧೀಶಂ ಶ್ರೀಹರಿಕೇಶಂ॥**

ಆಚಾರ್ಯ ಶಂಕರರು ತಮ್ಮ ಒಂದು ಶ್ಲೋಕದಲ್ಲಿ ಶಿವನನ್ನು ಕುರಿತು ಹೀಗೆ ಹೇಳಿದ್ದಾರೆ. ಎಲೈ ಮಹೇಶ್ವರನೇ, ನೀನು ಹೇಗಿದ್ದೀಯೋ ನಿನ್ನ ನಿಜತತ್ವ ನನಗೆ ತಿಳಿಯದು. ನಿನ್ನ ರೂಪವು ಯಾವುದಾದರೂ, ಆ ರೂಪದಿಂದಿರುವ ನಿನಗೆ ಪುನಃ ಪುನಃ ನಮಸ್ಕರಿಸುತ್ತೇನೆ. ಅತಿ ಚಂಚಲವಾದ ಮನಸ್ಸನ್ನು ಬಿಗಿಹಿಡಿಯುವುದು ಕಷ್ಟಸಾಧ್ಯ. ಆದುದರಿಂದ ನನ್ನ ಮನಸ್ಸು ಎಲ್ಲೆಲ್ಲಿ ಹಾರಾಡುತ್ತದೋ ಅಲ್ಲೆಲ್ಲ ನಿನ್ನ ಸ್ವರೂಪವು ಕಾಣಿಸಲಿ. ನನ್ನ ತಲೆ ಎಲ್ಲೆಲ್ಲಿ ಬಾಗುತ್ತದೋ ಅಲ್ಲೆಲ್ಲ ನಿನ್ನ ಚರಣಕಮಲಗಳು ಸನ್ನಿಹಿತವಾಗಿರಲಿ ಎನ್ನುತ್ತಾರೆ.

**ಯತ್ರೈವ ಯತ್ರೈವ ಮನೋಮದೀಯಂ**
**ತತ್ರೈವ ತತ್ರೈವ ತವಸ್ವರೂಪಂ।**
**ಯತ್ರೈವ ಯತ್ರೈವ ಶಿರೋ ಮದೀಯಂ**
**ತತ್ರೈವ ತತ್ರೈವ ಪದದ್ವಯಂತೇ।**

ಅಂತೆಯೇ ಇಲ್ಲಿ ಮುತ್ತಯ್ಯಭಾಗವತರು ದಿಗಂಬರನಾದ, ಸ್ಕಂದಪಿತನಾದ, ಗಣಸಮೂಹಕ್ಕೆ ಒಡೆಯನಾದ ಪಾರ್ವತೀಲೋಲನಿಗೆ ವಂದಿಸಿದ್ದಾರೆ. ಒಂದೆಡೆ ಅವರು ಸುಂದರಾಕಾರ, ರಾಜಾಲಂಕಾರನೆಂದು ಶಿವನನ್ನು ಸಂಬೋಧಿಸಿದರೆ ಇಲ್ಲಿ ದಿಗಂಬರನೆನ್ನುತ್ತಾರೆ. ಹಾಗೆಯೇ, ಶಿವನು ಗುಣಾತೀತನೂ ಆಗಿದ್ದಾನೆ. ತ್ರಿಕಾಲಾತ್ಮಕವಾದ ವಿಶ್ವವು ಶಿವನಿಂದಲೇ ಉತ್ಪನ್ನವಾಗುವುದರಿಂದ ಆತ ಭಾವಿತಮೂಲನೂ ಎನಿಸುತ್ತಾನೆ. ಅಂತಹ ಶಿವನಿಗೆ ಭಾಗವತರು ವಂದಿಸಿದ್ದಾರೆ.

ಸುಂದರವಾದ ಚಿಟ್ಟೆಸ್ವರವುಳ್ಳ ದೇವಂ ಕವಚಿನಂ ಎಂದಾರಂಭವಾಗುವ ಈ ಕೃತಿ ಬಂಗಾಳ ರಾಗದಲ್ಲಿ ನಿಬದ್ಧವಾಗಿದೆ. ಬಂಗಾಳವು 29ನೇ ಮೇಳದಲ್ಲಿ ಜನ್ಯ. ಆರೋಹಣ ಅವರೋಹಣಗಳು **ಸ ರಿ ಗ ಮ ಪ ಮ ರಿ ಪ ಸ – ಸ ನಿ ಪ ಮ ರಿ ಗ ರೀ ಸ.** ಸಾರ್ವಕಾಲಿಕವೂ, ಪ್ರಾಚೀನವೂ ಆದ ಈ ರಾಗದಲ್ಲಿ ತ್ಯಾಗರಾಜರು **ಗಿರಿರಾಜಸುತಾ ತನಯ, ಮುನುಪೇ ತೆಲಿಯಕ ಪೋಯೆನಾ, ಸಾಕ್ಷಿಲೇದನುಚು** ಎಂಬ ಕೃತಿಗಳನ್ನು ರಚಿಸಿದ್ದಾರೆ. ಗರ್ಭಪುರಿಯವರ **ರಾರಾ ರಾಮ** ಎಂಬ ಕೃತಿಯೊಂದೂ ಈ ರಾಗದಲ್ಲಿದೆ.

ಕಠೋರಾಯ ನಮಃ

## 37. ಶಂಭುಂ ಕಠೋರಂ ಸದಾಶ್ರಯೇಹಂ

ರಾಗ – ಭೂಪಾವಳಿ                                   ಆದಿತಾಳ

ಶಂಭುಂ ಕಠೋರಂ ಸದಾಶ್ರಯೇಹಂ।
ಕುಂಭಜಸೇವಿತಂ ಗುರುಗುಹತಾತಂ ಡಂಭರಹಿತಂ ಹರಂ ಡಮರುಗಧೃತಕರಂ॥
ನಾರಾಯಣಪ್ರಿಯಂ ನಾರದಸೇವ್ಯಂ ನಾದಶರೀರಂ ನವಮಣಿಹಾರಂ।
ಭೂರಾದಿಭುವನಪೋಷಣಂ ತೋಷಣಂ ಮಾರಹರಂ ಹರಿಕೇಶಂ ಈಶಂ॥

ಯಾವ ಪರಮೇಶ್ವರನು ನಿರುಪಾಧಿಕ ಪ್ರೇಮಕ್ಕೆ ಆಸ್ಪದನಾಗಿ ಪರಮಾನಂದಸ್ವರೂಪಿಯಾಗಿರುತ್ತಾನೋ ಅವನೇ ಪ್ರಚಂಡ ಮೃತ್ಯುರೂಪಿಯಾಗಿ ಭಯಂಕರನಾಗಿಯೂ ತೋರುತ್ತಾನೆ. ಶಿವನ ಸಂಹಾರಕ್ರಿಯೆಯ ಫಲವಾಗಿ ಚಂಡ, ಮಹಾಕಾಲ, ಭೈರವ ಮೊದಲಾದ ಪರ್ಯಾಯ ನಾಮಗಳು ಮೃತ್ಯು, ವಾಯು, ಬ್ರಹ್ಮ ಮೊದಲಾದ ಪುರಾಣಗಳಲ್ಲಿ ಉಲ್ಲೇಖವಿದೆ.

ಪ್ರಸ್ತುತ ಮುತ್ತಯ್ಯಭಾಗವತರು ಶಿವನನ್ನು ಕಠೋರನೆಂದು ಸಂಬೋಧಿಸಿದ್ದರೂ ಅದಕ್ಕೂ ಮುನ್ನ ಶಂಭು ಎಂದೇ ಶಿವನನ್ನು ಸ್ಮರಿಸಿದ್ದಾರೆ. **ಶಂ ಸುಖಂ ಭಾವಯತಿ ಉತ್ಪಾದಯತಿ** ಎಂಬುದು ಶಂಭು ಪದದ ವ್ಯುತ್ಪತ್ತಿ. ಇದರಂತೆ ಜಗತ್ತಿನ ಸುಖಕ್ಕೆ ಕಾರಣನಾದವನು ಶಂಭು ಎನಿಸುತ್ತಾನೆ. ಇಂತಹ ಶಂಭುವನ್ನು ಭಾಗವತರು, 'ನಾನು ಸದಾ ಆಶ್ರಯಿಸುತ್ತೇನೆ' ಎಂದು ಹಾಡುತ್ತಾರೆ. ಈತ ಕುಂಭಜಸೇವಿತ, ಸ್ಕಂದನ ತಂದೆ, ನಾದಶರೀರಿ, ಡಮರುಗ ಹಿಡಿದವನು, ನಾರದಸೇವಿತನೂ ಆದವನು. ಅಲ್ಲದೆ ನಾರಾಯಣಪ್ರಿಯನೂ ಆಗಿ ಭುವಿಯನ್ನು ಪೋಷಿಸುತ್ತಿರುವ ದೇವನಾಗಿದ್ದಾನೆ. ಕುಂಭಜನೆಂದರೆ ಅಗಸ್ತ್ಯಮುನಿಯೆಂದೂ ಹೇಳುತ್ತಾರೆ. ಅಲ್ಲದೆ ಕುಂಭಜನೆಂಬುವನು ಶಿವನ ಪ್ರಮಥಗಣ ಪರಿವಾರದಲ್ಲಿ ಒಬ್ಬನು. ಈತ ಶಿವನ ಆದೇಶದಂತೆ, ಕಾಶಿರಾಜನಾದ ದೀವೋದಾಸನನ್ನು ಕಾಶಿಯಿಂದ ಹೊರಡಿಸಲು ಕಾರ್ಯಪ್ರವೃತ್ತನಾದ. ಕುಂಭನು ಕಾಶಿಗೆ ಬಂದು ನಿಕುಂಭನೆಂಬ ಬ್ರಾಹ್ಮಣನ ಕನಸಿನಲ್ಲಿ ಮೈಯ್ದೋರಿ, ಶಿವನಿಗೆ ಕಾಶಿಪಟ್ಟಣದಲ್ಲಿ ಗುಡಿಯೊಂದನ್ನು ಕಟ್ಟಿಸಿ ಭಕ್ತಿಯಿಂದ ಪೂಜಿಸುವಂತೆ ಹೇಳಿದ. ನಿಕುಂಭ ಈ ವಿಷಯವನ್ನು ಕಾಶಿರಾಜನಿಗೆ ತಿಳಿಸಿದ. ರಾಜ ದೀವೋದಾಸ ಗುಡಿಯೊಂದನ್ನು ಕಟ್ಟಿಸಿ ಪೂಜಾದಿಗಳನ್ನು ನಿಷ್ಠೆಯಿಂದ ನಡೆಸುತ್ತಿದ್ದ. ಆದರೆ ದೀವೋದಾಸನ ಒಂದು ಕೋರಿಕೆಯೂ ನೆರವೇರಲೇ ಇಲ್ಲ. ಆದಾಗ್ಯೂ ಕ್ಷೇತ್ರದ ಮಹಿಮೆ ಮಾತ್ರ ಹೆಚ್ಚುತ್ತಲೇ ಇತ್ತು. ಇತರರ ಇಷ್ಟಾರ್ಥಗಳೂ ನೆರವೇರುತಿತ್ತು. ಆದರೆ ದೀವೋದಾಸನ ಯಾವ ಇಷ್ಟವೂ ನೆರವೇರುತ್ತಿರಲಿಲ್ಲವಾದ್ದರಿಂದ ಸಿಟ್ಟೇರಿದ್ದ ದೀವೋದಾಸ ಗುಡಿಯನ್ನು ಒಡೆಸಿದ್ದಲ್ಲದೇ, ಕಾಶಿಪಟ್ಟಣ ಹಾಳಾಗುವಂತೆ ಶಾಪವಿತ್ತು ಕಾಶಿಪಟ್ಟಣ ಬಿಟ್ಟು ಹೊರಟುಹೋದ. ಬಳಿಕ ಶಿವನು ತನ್ನ ಪರಿವಾರದೊಂದಿಗೆ ಕಾಶಿಪಟ್ಟಣಕ್ಕೆ ಬಂದು ಅಲ್ಲಿ ಸ್ಥಿರವಾಗಿ ಉಳಿದ. ಅಂತೆಯೇ ಕಾಶಿಪಟ್ಟಣಕ್ಕೆ ಅವಿಮುಕ್ತ ಕ್ಷೇತ್ರವೆಂದು ಹೆಸರಾದುದಾಗಿ ಪುರಾಣ ಕಥೆ. ಇದರ ಸಾರಾಂಶವೆಂದರೆ ಶಿವನು ಕಾಶಿಕ್ಷೇತ್ರದಲ್ಲಿ ನೆಲೆಸುವಲ್ಲಿ ಕುಂಭನು ಸಹಕರಿಸಿದ್ದರಿಂದ ಇಲ್ಲಿ ಕುಂಭಜಸೇವಿತ ಎಂಬ ಪ್ರಯೋಗವನ್ನು ಭಾಗವತರು

ಅಳವಡಿಸಿದ್ದಿರಬಹುದು. ಇನ್ನು, ಯಾವುದೇ ಆಡಂಬರವಿಲ್ಲದೆ ಶಿವನು ಡಂಭರಹಿತನೆನಿಸಿದ್ದಾನೆ. ಆದರೂ ಅತ್ಯಧಿಕ ಸಂತೋಷವನ್ನು ನೀಡುವವನಾಗಿದ್ದಾನೆ.

ಶಂಭುಂ ಕಠೋರಂ ಎಂದಾರಂಭವಾಗುವ ಈ ಕೃತಿಯು ಭೂಷಾವಳಿ ರಾಗದಲ್ಲಿ ನಿಬದ್ಧವಾಗಿದೆ. ಭೂಷಾವಳಿ 64ನೇ ಮೇಳದಲ್ಲಿ ಜನ್ಯವಾದ ಷಾಡವಸಂಪೂರ್ಣರಾಗ. ಅಪರೂಪವಾಗಿ ಪ್ರಯೋಗದಲ್ಲಿರುವ ಈ ರಾಗದಲ್ಲಿ ರಚನೆಗಳೂ ವಿರಳವೇ. ತ್ಯಾಗರಾಜಕೃತವಾದ **ತನಮೀದನೇ** ಎಂದಾರಂಭವಾಗುವ ಕೃತಿಯೊಂದು ಈ ರಾಗದಲ್ಲಿದೆ. ರಾಗದ ಆರೋಹಾವರೋಹಗಳು

**ಸ ರಿ ಗ ಮ ಪ ದ ಸ – ಸ ನಿ ದ ಪ ಮ ಗ ರಿ ಸ**

ತ್ರಿಪುರಾಂತಕಾಯ ನಮಃ

## 38. ತ್ರಿಪುರಾಂತಕಾ ದೇವಾ

ರಾಗ – ಬೇಹಾಗ್ ಆದಿತಾಳ

ತ್ರಿಪುರಾಂತಕಾ ದೇವಾ ದೀನಜನಾವನ ಜನನಾದಿ
ಭಯವಿಮೋಚನ್ ಮಾಮವ॥
ಕೃಪಾಸಾಗರ ಹರ ಗಣಾಧೀಶ್ವರ ಉಪಮನ್ಯು
ಪೂಜಿತ ಉಗ್ರಾವತಾರ॥
ಫಣಿಭೂಷಣ ನತಭಕ್ತ ತೋಷಣಾ ಪರಮ
ಕಲ್ಯಾಣಗುಣಾ ಪಾಪ ಶೋಷಣಾ
ಮಣಿವಾಚಕನುತ ಮಾಧವಸೇವಿತ
ಮಹನೀಯ ಹರಿಕೇಶ ಮಹಾದೇವೇಶ॥

ತ್ರಿಪುರಾಂತಕನೂ, ದೀನಜನಾವನನೂ, ಮುಕ್ತಿದಾಯಕನೂ, ಕೃಪಾಸಾಗರನೂ, ಉಪಮನ್ಯುವಿನಿಂದ ಪೂಜಿತನಾದವನೂ, ಆಶ್ರಿತರಿಗೆ ಸಂತಸ ನೀಡುವವನೂ, ಪರಮಕಲ್ಯಾಣಗುಣಗಣನೂ, ಪಾಪನಾಶಕನೂ, ಮಾಧವಸೇವಿತನೂ, ಮಹಾದೇವೇಶನೂ ಆದ ಮಹಾದೇವನಲ್ಲಿ ಮುತ್ತಯ್ಯಭಾಗವತರು ತಮ್ಮನ್ನು ಕೈ ಬಿಡದೆ ರಕ್ಷಿಸುವಂತೆ ಬೇಡಿದ್ದಾರೆ. ಕೃತಿಯಲ್ಲಿ ತ್ರಿಪುರಾಂತಕ, ಉಪಮನ್ಯುಪೂಜಿತ, ಮಣಿವಾಚಕನುತ ಎಂಬುವು ವಿಶೇಷ ಎನ್ನಬಹುದು.

ತಾರಕಾಸುರನ ಮೂವರು ಪುತ್ರರು ತಾರಕ, ವಿದ್ಯುನ್ಮಾಲಿ ಮತ್ತು ಕಮಲಾಕ್ಷ. ತಾರಕಾಸುರನನ್ನು ದೇವತೆಗಳು ಸಂಹರಿಸಿದ ನಂತರ ತ್ರಿಪುರಾಸುರರು ಶಿವನ ಮೇಲೆ ಯುದ್ಧ ಮಾಡಿದರು. ಅಂತ್ಯದಲ್ಲಿ ಶಿವನು ಪಾಶುಪತಾಸ್ತ್ರವನ್ನು ಅವರ ಮೇಲೆ ಪ್ರಯೋಗಿಸಿದನು. ಪಾಶುಪತಾಸ್ತ್ರದ ಜ್ವಾಲೆ ಭಯಂಕರವಾಗಿ ತ್ರಿಪುರವನ್ನೂ ಆವರಿಸಿತು. ಆಗ ತ್ರಿಪುರಾಸುರರು 'ಶಿವನೇ, ನಮ್ಮನ್ನೂ ಬೇಗ ದಹಿಸಿಬಿಡು. ಈ ಜನ್ಮದ ಕಡೆಯಲ್ಲಿ ನಿನ್ನ ಶತ್ರುಗಳಾದ ನಾವು ಮುಂದಿನ ಜನ್ಮದಲ್ಲಿ ನಿನಗೆ ಭಕ್ತರಾಗುವೆವು.' ಎನ್ನುತ್ತಾ ಅಗ್ನಿಯಲ್ಲಿ ಧುಮುಕಿ ಬೂದಿಯಾದರು. ಆಗ ಅವರ ಆತ್ಮಗಳು ಪರಶಿವನ ಪಾದಗಳಲ್ಲಿ ಲೀನವಾಯಿತು. ದೇವತೆಗಳು ಪುಷ್ಪವೃಷ್ಟಿಗೈದರೆಂಬುದು ಪೌರಾಣಿಕ ಕಥೆ. ಹೀಗೆ ಶಿವನು ತ್ರಿಪುರಗಳನ್ನು ದಹಿಸಿ ತ್ರಿಪುರಾಂತಕನೆನಿಸಿದ್ದಾನೆ.

ಇನ್ನು ಉಪಮನ್ಯು ಪ್ರಸ್ತಾಪ. ಉಪಮನ್ಯು ಎಂಬುವನು ವ್ಯಾಘ್ರಪಾದ ಮುನಿಯ ಮಗ. ಜನ್ಮಾಂತರಗಳಲ್ಲೂ ಸಿದ್ಧಪುರುಷನಾಗಿದ್ದ ಉಪಮನ್ಯು ತಪಸ್ಸು ಮಾಡಿ ಶಿವನಿಂದ ವರ ಪಡೆದವನು. ಶಿವನಿಂದ ಗಣೇಶತ್ವಸಹಿತ ಕ್ಷೀರಸಾಗರವನ್ನೇ ಹೊಂದಿದನು. **ಓಂ ನಮಃ ಶಿವಾಯ** ಎಂಬ ಷಡಕ್ಷರೀ ಮಂತ್ರವನ್ನು ಅವಿರತವಾಗಿ ಜಪಿಸುತ್ತಿದ್ದ ಈತನ ತಪಸ್ಸಿಗೆ ಹಲವು ರೀತಿಯ ವಿಘ್ನಗಳುಂಟಾದವಾದರೂ ನಿಶ್ಚಲ ಭಕ್ತಿಯಿಂದ ಇವನು ಶಿವನನ್ನಾರಾಧಿಸಿದನು. ಭಕ್ತಿಗೆ ಮೆಚ್ಚಿದ ಶಿವಪ್ರಿಯೆ ಪಾರ್ವತಿಯು 'ಶಿವನೇ

ಇವನಿಗೆ ನೀವು ಈ ಹಿಂದೆ ಕುಮಾರತ್ವವನ್ನು ಅನುಗ್ರಹಿಸಿರುವ ಪ್ರಕಾರ ಈತನು ಕೈಲಾಸದಲ್ಲಿ ಗಣಾಪತ್ಯವನ್ನು ವಹಿಸಲಿ' ಎಂದು ತನ್ನ ಮನದಾಸೆಯನ್ನು ಶಿವನ ಮುಂದಿಟ್ಟಳು. ಶಿವನು ಅದಕ್ಕೆ ಸಮ್ಮತಿಸಿದನು. ಅಲ್ಲದೇ ಶಿವನು ಉಪಮನ್ಯುವಿನೆದುರು ಇಂದ್ರರೂಪದಲ್ಲಿ ಪ್ರತ್ಯಕ್ಷಗೊಂಡಾಗ ಉಪಮನ್ಯುವು ಇದನ್ನರಿತು 'ವಿಶ್ವೇಶ್ವರನೇ, ನೀನು ಇಂದ್ರನ ರೂಪದಲ್ಲೇ ನನ್ನನ್ನು ಅನುಗ್ರಹಿಸು' ಎಂದು ಪ್ರಾರ್ಥಿಸಿದಾಗ, ವಿಶ್ವೇಶ್ವರನು 'ಸಪ್ತಸಾಗರಗಳ ಪೈಕಿ ಕ್ಷೀರಸಾಗರವು ನಿನ್ನದಾಗುವಂತೆ ಅನುಗ್ರಹಿಸುತ್ತೇನೆ' ಎಂದು ಹೇಳಿ ಸುಪ್ರೀತನಾದನು. ಈ ಪ್ರಕಾರ ಉಪಮನ್ಯುವಿಗೆ ಗಣೇಶತ್ವಸಹಿತ ಕ್ಷೀರಸಾಗರದ ಒಡೆತನವು ಪ್ರಾಪ್ತವಾಯಿತು. ಈ ಕಥೆಯ ಆಧಾರದಿಂದ ಭಾಗವತರು ಇಲ್ಲಿ ಉಪಮನ್ಯುಪೂಜಿತನೆಂಬ ಸಾಹಿತ್ಯವನ್ನು ಅಳವಡಿಸಿದ್ದಾರೆ.

ಹಾಗೆಯೇ, ಮಣಿವಾಚಕನುತ ಎಂಬಲ್ಲಿ ತಮಿಳುನಾಡಿನ ಒಬ್ಬ ಪ್ರಸಿದ್ಧ ಶೈವ ಸಂತರನ್ನು ಭಾಗವತರು ಸ್ಮರಿಸಿದ್ದಾರೆ. ಮಣಿವಾಚಕರ **ತಿರುವಾಚಕಂ** ಸ್ತುತಿಗಳು ಬಹು ಪ್ರಸಿದ್ಧವಾಗಿವೆ. ಇವುಗಳನ್ನು ಭಗವಂತನೇ ಇವರಿಂದ ಬರೆಸಿದ್ದಾನೆಂಬುದು ಸಂಪ್ರದಾಯಸ್ಥರ ನಂಬುಗೆ. ಹೀಗೆ ಶಿವಭಕ್ತರಾದ ಮಣಿವಾಚಕರಿಂದ ಸ್ತುತಿಸಲ್ಪಟ್ಟವನೆಂಬ ಮಾಹಿತಿಯನ್ನು ಭಾಗವತರು ಸೂಚ್ಯವಾಗಿ ಇಲ್ಲಿ ಅಳವಡಿಸಿದ್ದಾರೆ.

ಪ್ರಸ್ತುತ ಕೃತಿ ತ್ರಿಪುರಾಂತಕ ದೇವಾ ಬೇಹಾಗ್ ರಾಗದಲ್ಲಿ ನಿಬದ್ಧವಾಗಿದೆ. ಬೆಹಾಗ್ 29ನೇ ಮೇಳದಲ್ಲಿ ಜನ್ಯ. ರಾಗದ ಆರೋಹಣ ಅವರೋಹಣಗಳು **ಸ ಗ ಮ ಪ ನಿ ದ ನಿ ಸ – ಸ ನಿ ದ ಪ ಮ ಗಾ ರಿ ಸ.** ಭಾಷಾಂಗರಾಗವಾದ ಇದರಲ್ಲಿ ಕೈಶಿಕಿನಿಷಾದ, ಪ್ರತಿಮಧ್ಯಮಗಳು ಅನ್ಯಸ್ವರಗಳಾಗಿವೆ. **ಪಮಪ** ಎಂಬಲ್ಲಿ ಪ್ರತಿಮಧ್ಯಮ, **ಪಾಮಮಗ** ಎಂಬಲ್ಲಿ ಮೊದಲ ಮಧ್ಯಮ ಪ್ರತಿಮಧ್ಯಮ, ಎರಡನೆಯದು ಶುದ್ಧಮಧ್ಯಮವಾಗುತ್ತದೆ. **ಸಮಗಮಪನಿದನಿಸಾ** ಎಂದೂ ಆರೋಹಣ ಪ್ರಯೋಗವಾಗುವುದುಂಟು. **ಪದನಿದಪಮ, ಪನಿದಪಮ** ಪ್ರಯೋಗಗಳಲ್ಲಿ ಕೈಶಿಕಿನಿಷಾದ ಬರುತ್ತದೆ. ಛಾಯಾಪ್ರಧಾನವಾದ ಇದನ್ನು ಹಿಂದೂಸ್ಥಾನೀ ಬೇಹಾಗ್ ಎನ್ನುತ್ತಾರೆ. ಸ್ವಕೀಯ ಮತ್ತು ಅನ್ಯಸ್ವರಗಳೆರಡೂ ಸಮಾನವಾಗಿಯೇ ಬಳಸಲ್ಪಡುವ ರಾಗವಿದು. ಗೋಪಾಲಕೃಷ್ಣಭಾರತಿಯವರ **ಇದುದಾನೋ ತಿಲ್ಲೈಸ್ಥಲಂ,** ಸ್ವಾತಿತಿರುನಾಳರ **ಸ್ಮರಜನಕ ಶುಭಫಲದ,** ಪಲ್ಲವಿ ಶೇಷಯ್ಯರ್‌ರವರ **ಸುಂದರಾಂಗ,** ಗರ್ಭಪುರಿವಾಸರ **ಶ್ರೀಮಹಾಗಣಪತಿ,** ಮೈಸೂರು ವಾಸುದೇವಾಚಾರ್ಯರ **ಭಾವಯೇಹಂ,** ಹಾಗೂ ತಿಲ್ಲಾನಗಳು, ಜಾವಳಿಗಳೂ ಈ ರಾಗದಲ್ಲಿವೆ.

ಪ್ರಸ್ತುತ ಶಿವಾಷ್ಟೋತ್ತರಶತ ಕೃತಿಗುಚ್ಛದಲ್ಲಿನ ಬಹುತೇಕ ರಚನೆಗಳಿಗೆ ಚಿಟ್ಟೆಸ್ವರದ ಅಳವಡಿಕೆಯಿದೆ. ಆದರೆ ಈ ಕೃತಿಯಲ್ಲಿ ಚಿಟ್ಟೆಸ್ವರ ಕಾಣಬರದಿರುವುದು ಗಮನಾರ್ಹ ಅಂಶ. ಶಿವಾಷ್ಟೋತ್ತರಶತದ 38ನೇ ನಾಮ ತ್ರಿಪುರಾಂತಕ ಎಂಬುದರಿಂದಲೇ ಕೃತಿಕರ್ತರು ಕೃತಿಯನ್ನಾರಂಭಿಸಿದ್ದಾರೆ.

ವೃಷಾಂಕಾಯ ನಮಃ

## 39. ವೃಷಾಂಕಂ ಭಜರೇ ಮಾನಸ

ರಾಗ – ಕೇದಾರಗೌಳ                                                                 ಆದಿತಾಳ

ವೃಷಾಂಕಂ ಭಜರೇಮಾನಸ ವಿವಿಧಕರ್ಮಭವಂ ತ್ಯಜರೇ ಮಾನಸ॥
ವಿಷಾದಹರಂ ವಿಮಲಚರಿತಂ ನಿಷಾದವೇಷಂ ನಿರ್ಜರತೋಷಂ।
ರಾಜವಿರಾಜಿತ ರಮ್ಯಜಟಾಂಗಂ ರಮಣೀಮಂಡಿತ ರಮ್ಯವಾಮಾಂಕಂ।
ಆಜಾನುಬಾಹುಂ ಹರಿಕೇಶಪುರಗೇಹಂ ಅಖಿಲಾಂಡಕೋಟಿ ಬ್ರಹ್ಮಾಂನಾಯಕಂ॥

ಧರ್ಮಜ್ಞನೂ, ದುಃಖಹರನೂ, ವಿಮಲಚರಿತನೂ, ಕಿರಾತವೇಷನೂ, ದೇವತೆಗಳಿಗೆ ಮುದನೀಡುವವನೂ, ರಮ್ಯಜಟೆಯುಳ್ಳವನೂ, ಮನೋಹರಳಾದ ಪಾರ್ವತೀದೇವಿಯನ್ನು ವಾಮಾಂಕದಲ್ಲಿ ಹೊಂದಿದವನೂ, ಆಜಾನುಬಾಹುವೂ, ಬ್ರಹ್ಮಾಂಡನಾಯಕನೂ ಆದ ವೃಷಾಂಕನನ್ನು, ಎಲೈ ಮನಸ್ಸೇ, ಭಜಿಸು. ಏಕೆಂದರೆ, ಶಿವನನ್ನು ಹೀಗೆ ಭಜಿಸುವುದರಿಂದ ಪೂರ್ವಕರ್ಮಗಳ ದುಷ್ಫಲಗಳು ನಿವಾರಣೆಯಾಗುವುದು ಎಂದು ಕೃತಿಕರ್ತ ಮುತ್ತಯ್ಯಭಾಗವತರಿಲ್ಲಿ ಹಾಡಿದ್ದಾರೆ.

ನಮ್ಮ ವಾಗ್ಗೇಯಕಾರ ಭಕ್ತರೆಲ್ಲರಿಗೂ ಕರ್ಮಸಿದ್ಧಾಂತದಲ್ಲಿ ನಂಬುಗೆ ಇದೆ. ಜೀವಿಗಳ ಸುಖ ದುಃಖಗಳಲ್ಲಿ ಕಾಣಬರುವ ವೈವಿಧ್ಯತೆಗೆ ಅವರವರ ಪೂರ್ವಕರ್ಮಗಳೇ ಕಾರಣವೆಂದು ವಿಶ್ವಾಸವಿಟ್ಟವರು ನಮ್ಮ ಹಿರಿಯರು. ಅಂತೆಯೇ, ಯಾರೇನ ಮಾಡುವರು ಅವನಿಯೊಳಗೆ ಪೂರ್ವಜನ್ಮದ ಕರ್ಮ ಹಣೆಯಲ್ಲಿ ಬರೆದುದಕೆ, ನಾ ಮಾಡಿದ ಕರ್ಮವು ಬಲವಂತವಾದರೆ ಯಾರೇನ ಮಾಡ್ಯಾರೋ ಭಗವಂತ, ಕಷ್ಟ ಪಟ್ಟರೂ ಇಲ್ಲ ಕಳವಳಿಸಿದರಿಲ್ಲ ಭ್ರಷ್ಟಮಾನವ ಹಣೆಯಬರಹವಲ್ಲದೇ, ತನ್ನ ಪ್ರಾಪ್ತಿಯ ಫಲವ ತಾನರಿಯದೇ ಅನ್ಯರಿಗೆ ಆಡುವುದು ಅವಗುಣವು ಎಂದೆಲ್ಲಾ ದಾಸವರೇಣ್ಯರು ಹಾಡಿದ್ದಾರೆ. ಪಾಪಕರ್ಮಗಳಿಗೆ ಅನಿಷ್ಟ ಫಲವೂ, ಪುಣ್ಯಕರ್ಮಗಳಿಗೆ ಇಷ್ಟ ಫಲವೂ, ಮಿಶ್ರಕರ್ಮಗಳಿಗೆ ಮಿಶ್ರಫಲವೂ ಲಭಿಸುತ್ತದೆಂದು ಭಗವಂತನೇ ಹೇಳುತ್ತಾನೆ. ಬ್ರಹ್ಮಸೂತ್ರದ ಒಂದು ಸೂತ್ರದಲ್ಲಿ ಮನುಷ್ಯನ ಸುಖದುಃಖಗಳಿಗೆ ಕಾರಣ ಅವನ ಪಾಪಕರ್ಮಗಳೇ ಹೊರತು ದೇವರಲ್ಲ ಎನ್ನುತ್ತದೆ. ಈ ಬಗೆಗೆ ಶೃತಿವಾಕ್ಯವೊಂದು ಹೀಗಿದೆ.

**'ಪುಣ್ಯೋವೈ ಪುಣ್ಯೇನ ಕರ್ಮಣಾಭವತಿ ಪಾಪಃ ಪಾಪೇನೇತಿ'**

ಸಂಚಿತ, ಪ್ರಾರಬ್ಧ, ಆಗಾಮಿಗಳೆಂಬ ತ್ರಿವಿಧ ಕರ್ಮಗಳಿಂದ ಉಂಟಾಗುವ ಪುನರ್ಜನ್ಮದಿಂದ ಮುಕ್ತಿ ಪಡೆಯಲು ವೃಷಾಂಕನನ್ನು ಭಜಿಸು ಎಲೈ ಮನಸ್ಸೇ ಎಂದೇ ಭಾಗವತರು ನಮಗೆ ಕಿವಿಮಾತನ್ನು ಹೇಳಿದ್ದಾರೆ. ಮನುಷ್ಯನ ಮನಸ್ಸು ಅತ್ಯಂತ ಚಂಚಲ. ಅದನ್ನು ನಿಗ್ರಹಿಸಿ ದೇವರೆಡೆಗೆ ತಿರುಗಿಸುವುದು ಕಷ್ಟತರವಾದ ಕೆಲಸ ಎಂದೇ ಭಾಗವತರು ಮನಸ್ಸನ್ನು ಮತ್ತೆ ಮತ್ತೆ ಈ ಕೃತಿಯಲ್ಲಿ ಸಂಬೋಧಿಸಿದ್ದಿರಬಹುದು.

ಇನ್ನು ಈ ಕೃತಿಯಲ್ಲಿನ ಇನ್ನೊಂದು ಅಂಶ – ಶಿವನು ನಿಷಾದವೇಷಿಯಾದುದು. ಶಿವನು ಕಿರಾತವೇಷ ಧರಿಸಿ ಬಂದು ಅರ್ಜುನನೊಡನೆ ಮುಷ್ಟಿಯುದ್ಧ ಮಾಡಿದ ಪ್ರಸಂಗವೊಂದುಂಟು. ಇದನ್ನು ಭಾಗವತರು ಇದೇ ಕೃತಿಗುಚ್ಛದ 27ನೇ ಕೃತಿಯಲ್ಲೂ ಪ್ರಸ್ತಾಪಿಸಿರುವುದನ್ನು ನಾವಿಲ್ಲಿ ಸ್ಮರಿಸಬಹುದು.

ಪ್ರಸ್ತುತ, ವೃಷಾಂಕಂ ಭಜರೇ ಕೃತಿಯು ಕೇದಾರಗೌಳರಾಗದಲ್ಲಿ ನಿಬದ್ಧವಾಗಿದೆ. 28ನೇ ಮೇಳ ಹರಿಕಾಂಬೋಜಿಯಲ್ಲಿ ಜನ್ಯವಾದ ಕೇದಾರಗೌಳರಾಗದ ಆರೋಹಾವರೋಹಗಳು **ಸ ರಿ ಮ ಪ ನಿ ಸ – ಸ ನಿ ದ ಪ ಮ ಗ ರಿ ಸ.** ಔಡವಸಂಪೂರ್ಣ ಉಪಾಂಗರಾಗವಿದು. ಪ್ರಾಚೀನವಾದ, ಮಂಗಳಕರವಾದ ಈ ರಾಗದಲ್ಲಿನ ಕೆಲವು ಪ್ರಸಿದ್ಧ ರಚನೆಗಳೆಂದರೆ **ಸಾಮಿದಯ, ವೀರಿಬೋಣಿ** ವರ್ಣಗಳು, **ತುಳಸೀಬಿಲ್ವ, ವೇಣುಗಾನಲೋಲುನಿ, ವಾರಿಜನಯನ, ನೀಲಕಂಠಂ, ಜಲಜನಾಭ, ಸರಗುನಪಾಲಿಂಪ, ಪಾಲಯಮಾಂ ಪರಮೇಶ್ವರ** ಕೃತಿಗಳು, **ಏಮಂದುನಮ್ಮ, ರಮ್ಮನವೇ ಸಮುಖಾನ** ಪದಗಳು, **ಊರಿವಾರೇಮಿ, ಏರಾತಗುನಟರಾ** ಜಾವಳಿಗಳು. ಮುತ್ತಯ್ಯಭಾಗವತರ ಪ್ರಸ್ತುತ ಕೃತಿ ವೃಷಾಂಕಂ ಸುಂದರವಾದ ಚಿಟ್ಟೆಸ್ವರವನ್ನು ಹೊಂದಿದೆ.

ವೃಷಭಾರೂಢಾಯ ನಮಃ

## 40. ಶಿವಂ ವೃಷಭಾರೂಢಂ ಶ್ರೀಕಂಠಂ

ರಾಗ – ಮೋಹನಕಲ್ಯಾಣಿ ಖಂಡಛಾಪುತಾಳ

**ಶಿವಂ ವೃಷಭಾರೂಢಂ ಶ್ರೀಕಂಠಂ ವಂದೇ।**
**ಭವಪಾಶವಿಮೋಚನಂ ಭವಂ ತ್ರಿಲೋಚನಂ॥**
**ಸಾಮವೇದಪ್ರಿಯಂ ಸಂಗೀತಸಾರಂ ಕಾಮಿತಫಲಪ್ರದಂ**
**ಕಾಂಚನವಿಗ್ರಹಂ ಹೇಮಗಿರಿವಾಸಿನಂ ಈಶಂ ಹರಿಕೇಶಂ॥**

ಎತ್ತಿನಮೇಲೆ ಆರೂಢನಾಗಿರುವ, ಸಂಸಾರವೆಂಬ ಮೋಹಪಾಶವನ್ನು ವಿಮೋಚಿಸುವ, ತ್ರಿಲೋಚನನಾದ, ಸಂಗೀತಸಾರ, ಸಾಮವೇದಪ್ರಿಯ, ಅಭೀಷ್ಟವರದ, ಸ್ವರ್ಣವಿಗ್ರಹನಾದ, ರಜತಗಿರಿನಿವಾಸನಾದ, ಮಂಗಳಕರ ಈಶ–ಶ್ರೀಕಂಠನಿಗೆ ನಮಸ್ಕಾರಗಳು ಎಂಬುದು ಕೃತಿಯ ಭಾವಾರ್ಥವಾಗಿದೆ. ಇಲ್ಲಿ ಬಳಕೆಯಾದ ಭವ ಪದವು ಶ್ಲೇಷಾರ್ಥ ಹೊಂದಿದೆ. 1. ಸಂಸಾರ 2. ಸದಾಕಾಲ ಅಸ್ತಿತ್ವದಲ್ಲಿರುವ ಎಂಬೆರಡು ಅರ್ಥದಲ್ಲಿ ಪ್ರಯೋಗಗೊಂಡಿದೆ. ವೃಷಭ ಎಂಬ ಪದಕ್ಕೆ ಮಹಾಪ್ರಾಣವರ್ಷಣ ಎಂಬರ್ಥವನ್ನೂ ಹೇಳುತ್ತಾರೆ. ಜಗತ್ತಿನ ಮಹಾಪ್ರಾಣರೂಪವಾಗಿ ಹರಡಿದ ಶಕ್ತಿಯೇ ಶಿವ. ಅಂತೆಯೇ, ಉತ್ಪತ್ತಿ ಕಾರಣವಾದ ಮಹಾಪ್ರಾಣವೂ ಶಿವನೇ. ಹೀಗಾಗಿ ವೃಷಭ ಎಂಬುದು ಶಕ್ತಿರೂಪವಾಗಿಯೂ ಇದೆ. ಶಿವತತ್ತ್ವದ ಅಧ್ಯಾತ್ಮಿಕತೆಯನ್ನವಲೋಕಿಸುವಾಗ ವೃಷಭಕ್ಕೆ ಧರ್ಮ–ಅರ್ಥ–ಕಾಮ–ಮೋಕ್ಷಗಳೆಂಬ ನಾಲ್ಕು ಕಾಲುಗಳನ್ನು ಬಣ್ಣಿಸಲಾಗಿದೆ. ಇದು ವೇದಗಳಲ್ಲಿದೆ. ಈ ಚತುಷ್ಪಾದಿ ವೃಷಭವನ್ನೇರಿ ತುರೀಯಾವಸ್ಥೆಯನ್ನು ಸಾಧಕನು ಹೊಂದಬೇಕೆಂಬುದೇ ವೃಷಭವಾಹನನ ಸಂಕೇತವೆಂದು ವಿಬುಧರ ಅಭಿಪ್ರಾಯವಾಗಿದೆ.

ಕೃತಿಯು ಮೋಹನಕಲ್ಯಾಣಿರಾಗದಲ್ಲಿ ಅಳವಡಿಕೆಯಾಗಿದೆ. ಮೋಹನಕಲ್ಯಾಣಿಯು 65ನೇ ಮೇಳದಲ್ಲಿ ಜನ್ಯವಾದ ಔಡವಸಂಪೂರ್ಣ ಉಪಾಂಗರಾಗ. ಆರೋಹಣ ಅವರೋಹಣಗಳು **ಸ ರಿ ಗ ಪ ದ ಸ – ಸ ನಿ ದ ಪ ಮ ಗ ರಿ ಸ.** ಆರೋಹಣದಲ್ಲಿ ಮೋಹನವೂ ಅವರೋಹಣದಲ್ಲಿ ಕಲ್ಯಾಣಿಯೂ ಇರುವುದಾಗಿ, ಇದು ಎರಡು ರಾಗಗಳ ಸಮ್ಮಿಶ್ರರೂಪದ ಮೋಹನಕಲ್ಯಾಣಿ ಎನಿಸಿದೆ. ಈ ವೇಳೆಗೆ ರೂಢಿ ತಪ್ಪಿದ್ದ ಮೋಹನಕಲ್ಯಾಣಿ ರಾಗದಲ್ಲಿ ಮುತ್ತಯ್ಯಭಾಗವತರೊಬ್ಬರೇ ಮೂರು ರಚನೆಗಳನ್ನು ಸೃಷ್ಟಿಸಿದ್ದಾರೆ. ಅವೆಂದರೆ, **ಶಿವಂ ವೃಷಭಾರೂಢಂ, ಭುವನೇಶ್ವರಿಯ ನೆನೆ ಮಾನಸವೇ, ಸಿದ್ಧಿವಿನಾಯಕಂ** ಕೃತಿಗಳು. ಪ್ರಸ್ತುತ ಕೃತಿ ಶಿವಂ ವೃಷಭಾರೂಢಂ ದಾಟು ಸ್ವರಗಳಿಂದ ಸಂಯೋಜಿತವಾದ ಕ್ಲಿಷ್ಟ ಚಿಟ್ಟೆಸ್ವರವೊಂದನ್ನು ಹೊಂದಿದೆ.

ಭಸ್ಮೋದ್ಧೂಳಿತ ವಿಗ್ರಹಾಯ ನಮಃ

## 41. ಜಯಜಯ ಭಸ್ಮೋದ್ಧೂಳಿತ ವಿಗ್ರಹ

**ರಾಗ – ಶುದ್ಧಸೀಮಂತಿನಿ** **ಆದಿತಾಳ**

**ಜಯಜಯ ಭಸ್ಮೋದ್ಧೂಳಿತ ವಿಗ್ರಹ**
**ಜಯಜಯ ಶ್ರೀಶಿವಕಾಮೀ ನಾಯಕ॥**
**ಜಯಜಯ ಶ್ರೀಪತಿಪೂಜಿತ ಚರಣ ಜಯಜಯ ಭವಭಯಹರಣ ।**
**ಜಯವೃಷವಾಹ ಜಯಸಿತದೇಹ ಜಯಭಕ್ತಮೋಹ ಜಯಶಿವಗೇಹ**
**ಜಯಗಂಗಾಧರ ಜಯಜಯಶಶಿಧರ ಜಯಹರಿಕೇಶ ಜಯಚಿತ್ಸಭೇಶ॥**

ಭಸ್ಮೋದ್ಧೂಳಿತ ವಿಗ್ರಹನೂ, ಶಿವಕಾಮಿಪತಿಯೂ, ವಿಷ್ಣುಪೂಜಿತಚರಣನೂ, ಭವಭಯನಿವಾರಣನೂ, ಶ್ವೇತದೇಹನೂ, ಭಕ್ತಮೋಹನೂ, ಮಂಗಳಕರನೂ, ಗಂಗಾಧರ ಶಶಿಧರನೂ ಆದ ಶಿವನಿಗೆ ಇಲ್ಲಿ ಉಳಿದ ಬಹುತೇಕ ಕೃತಿಗಳಲ್ಲಿರುವಂತೆ ಪಾಹಿಮಾಂ, ವಂದೇಹಂ, ಭಕ್ತಿಂದೇಹಿ, ಭಜಾಮ್ಯಹಂ ನಂತಹ ಕ್ರಿಯಾಪದಗಳ ಬಳಕೆಯಿಲ್ಲ. ಈಶ್ವರನ ಸರ್ವಶಕ್ತತೆಗೆ, ದಯಾಪರತೆಗೆ, ಕಲಾತ್ಮಕ ಸೌಂದರ್ಯಕ್ಕೆ, ಕೈಗೊಂಡ ಕಾರ್ಯಗಳೆಲ್ಲಕ್ಕೂ ಜೈಕಾರ ಹಾಕುವುದು ಪೂರ್ವದ ಅನೇಕ ಭಕ್ತ ವಾಗ್ಗೇಯಕಾರರಲ್ಲಿ ಕಾಣುತ್ತೇವೆ. ಪುರಂದರದಾಸರು **ಜಯಜಾನಕೀಕಾಂತಾ, ಜಯಸಾಧುಜನವಿನುತ ಜಯತುಮಹಿಮಾನಂದ್ಕ, ಜಯಭಾಗ್ಯವಂತ** ಎಂದು ಹಾಡಿರುವುದನ್ನೂ, **ಜಯಜಯಸೀತಾರಾಂ ಜಯಜಯರಘುರಾಂ ಜಯಜಯಕಲ್ಯಾಣಸುಂದರ ಕಾರುಣ್ಯರಾಂ** (ಸಾವೇರಿ), **ಜಯಜಯಶ್ರೀರಘುರಾಮ** (ಗೌರಿ) ಎಂದು ತ್ಯಾಗರಾಜರೂ ಹಾಡಿರುವುದನ್ನು ಪ್ರಾಸಂಗಿಕವಾಗಿ ನಾವಿಲ್ಲಿ ಉದಾಹರಿಸಬಹುದು. ಈಶ್ವರನ ತತ್ವರೂಪವನ್ನು ವಿವರಿಸುವಾಗ, ಈತನ ಭಸ್ಮಲೇಪನ ಜಗತ್ತಿನಲ್ಲಿ ವೈರಾಗ್ಯವೇ ಶ್ರೇಷ್ಠವೆಂದು ಸಾರಿ ಹೇಳುತ್ತದೆನ್ನುತ್ತಾರೆ ವಿದ್ವಾಂಸರು. ಅಂತೆಯೇ, ಇಲ್ಲಿ ಬಳಕೆಯಾಗಿರುವಂತೆ ಶಿವನು ಸಿತದೇಹನಾಗಿದ್ದಾನೆ. ಎಂದರೆ ಶಿವನ ಬಣ್ಣ ಶ್ವೇತ ಎಂಬುದು. ಪ್ರಕೃತಿಯು ನಿಷ್ಕ್ರಿಯವಾಗಿ ಪ್ರಶಾಂತವಾಗುವ ಅವಸ್ಥಾ ವಿಶೇಷವೇ ಶಿವಾವಸ್ಥಾ. ಈ ಅವಸ್ಥೆಯ ದ್ಯೋತಕವೇ ಶ್ವೇತವರ್ಣ. ಆದುದರಿಂದಲೇ ಶಿವನ ಬಣ್ಣ ಶ್ವೇತ ಎನ್ನುತ್ತಾರೆ ಪಂಡಿತರು.

ಇನ್ನು ಕೃತಿಯು 8ನೇ ಮೇಳದಲ್ಲಿ ಜನ್ಯವಾದ ಷಾಡವ ಉಪಾಂಗರಾಗವಾದ ಶುದ್ಧಸೀಮಂತಿನಿಯಲ್ಲಿದೆ. ರಾಗದ ಆರೋಹಾವರೋಹಗಳು **ಸ ರಿ ಗ ಮ ಪ ದ ಸ – ಸ ದ ಪ ಮ ಗ ರಿ ಸ**. ತ್ಯಾಗರಾಜವಿರಚಿತ **ಜಾನಕೀರಮಣ** ಎಂಬ ಏಕೈಕ ಕೃತಿಯಿಂದಲೇ ರೂಢಿಗೆ ಬಂದ ರಾಗವಿದು. ಇವರ ಕಾಲಕ್ಕೂ ಮುನ್ನ ಈ ರಾಗದ ಪ್ರಯೋಗವಿದ್ದಂತಿಲ್ಲ. ನಿಷಾದವರ್ಜ್ಯವಾದ ಈ ರಾಗದಲ್ಲಿ ವಿಸ್ತೃತ ಆಲಾಪನೆಗೆ ಅವಕಾಶವಿಲ್ಲ. ಪ್ರಸ್ತುತ ಮುತ್ತಯ್ಯಭಾಗವತರ ಜಯಜಯ ಭಸ್ಮೋದ್ಧೂಳಿತ ವಿಗ್ರಹ ಕೃತಿಯಲ್ಲಿ ಅವರು ಈಶ್ವರನಿಗೆ 17 ಬಾರಿ ಜಯಘೋಷ ಮಾಡಿದ್ದಾರೆ. ಕೃತಿಯಲ್ಲಿ ಸುಂದರವಾದ ಚಿಟ್ಟಸ್ವರವೂ ಅಳವಟ್ಟಿದೆ.

ಸಾಮಪ್ರಿಯಾಯ ನಮಃ

## 42. ಸಾಮಪ್ರಿಯ ಶಿವಶಂಕರ ನಮೋಸ್ತುತೇ

**ರಾಗ – ಸಾಮ** **ಆದಿತಾಳ**

**ಸಾಮಪ್ರಿಯ ಶಿವಶಂಕರ ನಮೋಸ್ತುತೇ।**
**ಕೋಮಲಗಾತ್ರ ಕುಬೇರಮಿತ್ರ ಸಾಮಜಮುಖತಾತ ಶಂಕುರುನಾಥಾ॥**
**ಕನಕಗಿರಿನಿಲಯ ಘನಫಣಿವಲಯ ಮನಸಿಜಹರ ಸುರಮಾನಿತ ಪದಯುಗ।**
**ದಿನಕರಕೋಟಿ ತೇಜೋಮಯವಿಗ್ರಹ ಅನಘಹರಿಕೇಶ ಆನಂದನಟೇಶ॥**

ಸಾಮಪ್ರಿಯನಾದ ಶಿವಶಂಕರನಿಗೆ ಭಾಗವತರು ಈ ಕೃತಿಯಲ್ಲಿ ವಂದಿಸುತ್ತಿದ್ದಾರೆ. ಸುಕುಮಾರಶರೀರಿ, ಕುಬೇರಮಿತ್ರ, ಗಜಮುಖನ ತಂದೆ, ಬಂಗಾರದ ಬೆಟ್ಟದಲ್ಲಿ ನೆಲೆಸಿದ, ಶ್ರೇಷ್ಠವಾದ ಸರ್ಪಗಳನ್ನು ವರ್ತುಲಾಕಾರವಾಗಿ ಹೊಂದಿದ, ಕಾಮಸಂಹಾರಿ, ದೇವತೆಗಳಿಂದ ಮಾನ್ಯವಾದ ಕೋಟಿಸೂರ್ಯರ ತೇಜಸ್ಸನ್ನು ಹೊಂದಿದೆ, ನಾಟ್ಯರೂಪಿ ಶಂಕರನೇ ನಿನಗೆ ನಮನಗಳು, ನಮಗೆ ಮಂಗಳವನ್ನುಂಟುಮಾಡು ಎಂಬುದು ಕೃತಿಯ ಭಾವಾರ್ಥ.

ಶಿವನು ಸಾಮಪ್ರಿಯನೆಂಬ ಅಂಶವನ್ನು ಭಾಗವತರು ಹಲವು ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ. ಪ್ರಸ್ತುತ ಕೃತಿಯಲ್ಲಿ ಆನಂದನಟೇಶನನ್ನು ಸ್ಮರಿಸಿರುವುದು ವಿಶೇಷ. ಈಶ್ವರನೇ ನಾಟ್ಯದ ಪ್ರಧಾನದೇವತೆ ಹಾಗೂ ಪ್ರಥಮ ನಾಟ್ಯಾಚಾರ್ಯ. ಒಮ್ಮೆ ಶಿವಪಾರ್ವತಿಯರಲ್ಲಿ ನೃತ್ಯಸ್ಪರ್ಧೆ ಉಂಟಾದಾಗ ಶಿವನು ಲಲಾಟತಿಲಕಕರಣವನ್ನು (ಕಾಲನ್ನು ನೇರವಾಗಿ ಮೇಲೆತ್ತುವುದು) ಪ್ರದರ್ಶಿಸಿ ಪಾರ್ವತಿಯನ್ನು ಸೋಲಿಸಿ ನಟರಾಜನೆನಿಸಿದ್ದಾನೆ. ನಟರಾಜನ ಆನಂದತಾಂಡವದ ರೂಪ ಅರ್ಥಾತ್ ನಾದಾಂತ ತಾಂಡವದ ಮೂರ್ತಿಗೆ ನಾಲ್ಕು ಕೈಗಳು ಎರಡು ಕಾಲುಗಳೂ ಇರುವಂತೆ ಚಿತ್ರಣವಿದೆ. ಇದರಲ್ಲಿ ಬಲಗಾಲು ರಾಕ್ಷಸನ ಬೆನ್ನಮೇಲಿದ್ದು ಎಡಗಾಲು ಮೇಲೆತ್ತಿ ಅನುಗ್ರಹರೂಪವನ್ನು ತೋರುತ್ತದೆ. ಇನ್ನು ಬಲಭಾಗದ ಮೇಲಿನ ಕೈನಲ್ಲಿರುವ ಡಮರುಗವು ಸೃಷ್ಟಿಯನ್ನೂ, ಕೆಳಗಿನ ಬಲಗೈ ಅಭಯಹಸ್ತವನ್ನೂ ಸೂಚಿಸುತ್ತವೆ. ಅಂತೆಯೇ ಎಡಗಡೆಯ ಮೇಲಿನ ಕೈ ಪವಿತ್ರಾಗ್ನಿಯನ್ನೂ, ಕೆಳಗಿನ ಕೈ ರಾಕ್ಷಸನನ್ನೂ ತೋರುವಂತಿವೆ. ಶಿವನ ಈ ನಾಟ್ಯಭಂಗಿಯಲ್ಲಿ ಅವನ ಜಟೆ ಹಾರಾಡುತ್ತಿದೆ. ಈ ಸಂಜ್ಞೆಗಳು ಶಿವನು ಅಧರ್ಮನಾಶಕನೆಂದೂ, ಅಮರನೆಂದೂ, ಆತನ ಜಟೆಯಿಂದಿಳಿದ ನೀರು ಜೀವನದ ನಿರಂತರ ಪ್ರವಾಹವೆಂದೂ ಅರ್ಥೈಸಲಾಗಿದೆ. ಇದು ಶಿವನ ಆನಂದತಾಂಡವ ರೂಪವಾಗಿದೆ. ಇಂತಹ ಆನಂದ ನಟೇಶನನ್ನು ಭಾಗವತರಿಲ್ಲಿ ನಮಸ್ಕರಿಸಿದ್ದಾರೆ.

ಸಾಮಪ್ರಿಯನಾದ ಶಿವನನ್ನು ಸಾಮರಾಗದಲ್ಲೇ ವರ್ಣಿಸುತ್ತಾ ರಾಗ–ಸಾಹಿತ್ಯಗಳಲ್ಲಿ ಸಾಮ್ಯತೆ ತರಲಾಗಿದೆ. ಸಾಮರಾಗವು 28ನೇ ಮೇಳದಲ್ಲಿ ಜನ್ಯವಾದ ಔಡವ ಷಾಡವ ಉಪಾಂಗರಾಗ. ಆರೋಹಾವರೋಹಗಳು **ಸ ರಿ ಮ ಪ ದ ಸೆ – ಸೆ ದ ಪ ಮ ಗ ರಿ ಸ**. ಶಾಂತರಸ ಪ್ರಧಾನವಾದ,

ಸಾರ್ವಕಾಲಿಕ ರಾಗವಿದು. ನಿಷಾದವರ್ಜ್ಯರಾಗ. ಸಾಮಕ್ಕೆ ಬಹಳ ಹತ್ತಿರದ ರಾಗವೆಂದರೆ ಆರಭಿ. ಆದರೆ, ಮಧ್ಯಮ ಹಾಗೂ ಗಾಂಧಾರಗಳ ಸ್ಥಿರಪ್ರಯೋಗಗಳು ಮತ್ತು ಅವುಗಳಿಗೆ ನೀಡುವ ಗಮಕ ಪ್ರಯೋಗದಿಂದ ರಾಗಭಾವ ಸ್ಪಷ್ಟಪಡಿಸಬೇಕಾಗುತ್ತದೆ. ಈ ರಾಗದಲ್ಲಿ ತ್ಯಾಗರಾಜಕೃತ **ಶಾಂತಮು ಲೇಕ ಸೌಖ್ಯಮು ಲೇದು,** ದೀಕ್ಷಿತರ **ಪರ್ವತವರ್ಧಿನಿ ಪಾಹಿಮಾಂ, ಅನ್ನಪೂರ್ಣೇ ವಿಶಾಲಾಕ್ಷಿ** ಕೃತಿಗಳು ರೂಢಿಯಲ್ಲಿವೆ. ಪ್ರಸ್ತುತ ಭಾಗವತರ ಕೃತಿ **ಸಾಮಪ್ರಿಯ ಶಿವಶಂಕರ**ದಲ್ಲಿ ಜಂಟೀಸ್ವರಗಳನ್ನು ವಿಶೇಷವಾಗಿ ಹೊಂದಿದ ಸುಂದರ ಚಿಟ್ಟೆಸ್ವರವೊಂದೂ ಅಳವಟ್ಟಿದೆ. ಇದರಲ್ಲಿ **ಸ̇ಾಸ̇ದದಪಪಮ – ಪಾಪಮಮಗಗರಿ, ದಸ̇ರಿ̇ಮ̇ ಪದಸ̇ರಿ̇** ಎಂಬಂಥ ಜೋಡಣೆಗಳು ಚೇತೋಹಾರಿಯಾಗಿವೆ.

ಸ್ವರಮಯಾಯ ನಮಃ

## 43. ಸ್ವರಮಯಾ ಸುಗುಣಾಲಯಾ

ರಾಗ – ಕೀರವಾಣಿ ರೂಪಕತಾಳ

**ಸ್ವರಮಯಾ ಸುಗುಣಾಲಯಾ ಸುಂದರಾಯ ನಮೋಸ್ತುತೇ।**
**ಪರಮಪುರುಷ ಪಂಚಾನನ ಪಶುಪಾಶ ವಿಮೋಚನ**
**ಕರಧೃತ ಡಮರುಗ ಜನಿತೋಂಕಾರನಾದ ವಿಲಸಿತ ಸಪ್ತ॥**
**ಧನಧಾನ್ಯ ಸಂಪತ್ಪ್ರದ ಸರಸ್ವತೀ ಪ್ರಿಯನುತ**
**ಮನಸಿಜ ಮದಹರ ಮಾಧವ ಪ್ರಿಯಕರ**
**ಕನಕಶೈಲನಿವಾಸ ಕಾಳಕಂಠಸರ್ವೇಶ**
**ಸನಕ ಸನಂದನವಂದಿತ ಸದಯ ಹರಿಕೇಶ ಈಶ॥**

ಸದ್ಗುಣಗಳ ಖನಿಯಾದ ಸುಂದರ ಪಂಚಾನನ ಶಿವನಿಗೆ ಭಾಗವತರು ಈ ಕೃತಿಯ ಮೂಲಕ ನಮಸ್ಕರಿಸಿದ್ದಾರೆ. ಶಿವನು ಪಾಶವಿಮೋಚನನಾಗಿ, ಓಂಕಾರವನ್ನು ಪ್ರಕಾಶಿಸುವ ಡಮರುಗವನ್ನು ಹಿಡಿದವನಾಗಿ, ಸರಸ್ವತೀಪ್ರಿಯನಾಗಿ, ಕಾಮಸಂಹಾರಿಯಾಗಿ, ವಿಷ್ಣುಪ್ರಿಯನಾಗಿ, ಬಂಗಾರದ ಬೆಟ್ಟದಲ್ಲಿ ವಾಸಿತನಾಗಿ, ಕಪ್ಪಾದ ಕಂಠ ಹೊಂದಿದವನಾಗಿ (ವಿಷಕಂಠ), ಸನಕಸನಂದನಾದಿ ಮುನಿಗಳಿಂದ ವಂದಿತನಾಗಿ ಇಲ್ಲಿ ವರ್ಣಿತನಾಗಿದ್ದಾನೆ.

ಸಪ್ತಸ್ವರಮಯಾ–ಕರಧೃತ ಡಮರುಗ ಜನಿತೋಂಕಾರನಾದ ವಿಲಸಿತ, ಕಾಳಕಂಠ, ಸರ್ವೇಶಾ ಎಂಬುವು ಕೃತಿಯಲ್ಲಿನ ವಿಶೇಷಗಳಾಗಿ ತೋರುತ್ತವೆ. ಈಶ್ವರನು ನಾದಾತ್ಮ, ನಾದಸ್ವರೂಪಿ, ನಾದಲೋಲ, ನಾದಶರೀರಿ, ನಾದಮಯಪ್ರಾಣನೂ ಹೌದು. ಲೋಕವೆಲ್ಲಾ ನಾದಾಧೀನವೇ ಆಗಿದೆ. ಶಿವನ ಕೈಯಲ್ಲಿರುವ ಡಮರುಗದಿಂದ ಉದ್ಭವವಾದ ಓಂಕಾರದಲ್ಲಿ ಪ್ರಕಾಶಿಸುತ್ತಿರುವ ಎನ್ನುವಾಗ ವಿಷ್ಣುಪುರಾಣದಲ್ಲಿನ ಶ್ಲೋಕ ಹಾಗೂ ಶಾರ್ಙ್ಗದೇವನು ಸಂಗೀತರತ್ನಾಕರದಲ್ಲಿ ಹೇಳಿರುವ ಶ್ಲೋಕಗಳು ಸ್ಮರಣೀಯವೆನಿಸುತ್ತವೆ.

**ಕಾವ್ಯಾಲಾಪಶ್ಚಯೇ ಕೇಚಿದ್ ಗೀತಾಕಾನ್ಯಖಿಲಾನಿ ಚ।**
**ಶಬ್ದಮೂರ್ತಿ ಧರಸ್ಯೈತೇ ವಿಷ್ಣೋರಂಶಾ ಮಹಾತ್ಮನಃ॥**

ಇದರಂತೆ ಸಮಸ್ತಕಾವ್ಯಗಳೂ, ಗೀತೆಗಳೂ, ಶಬ್ದಸಾಕಾರನೂ, ಮಹಾತ್ಮನೂ ಆದ ವಿಷ್ಣುವಿನ ಅಂಶವಾಗಿದೆ. ಅಂತೆಯೇ **ನಾದೇನ ವ್ಯಜ್ಯತೇ ವರ್ಣಃ ಪದಂ ವರ್ಣಾತ್ಪದಾದ್ವಚಃ। ವಚಸೋ ವ್ಯವಹಾರೋಯಂ ನಾದಾಧೀನಮತೋಜಗತ್॥** ಇದರ ಪ್ರಕಾರ ನಾದದಿಂದ ಅಕ್ಷರಗಳೂ, ಅಕ್ಷರಗಳಿಂದ ಶಬ್ದಗಳು, ಶಬ್ದಗಳಿಂದ ವ್ಯವಹಾರವೂ ಉಂಟಾಗುತ್ತದೆ. ಆದ್ದರಿಂದ ಲೋಕವೆಲ್ಲ ನಾದಾಧೀನವೇ ಹೌದು. ಡಮರುಗಜನಿತ

ಓಂಕಾರನಾದ ಎಂದು ಭಾಗವತರು ಹೇಳುವಾಗ ಓಂಕಾರನಾದದ ಮಹತ್ವವೂ, ಅದು ಶಿವನ ಡಮರುಗದಿಂದ ಜನಿಸಿದೆ ಎಂದೂ ವಿದಿತವಾಗುತ್ತದೆ. ಪ್ರಪ್ರಥಮ ಮೂಲದಲ್ಲಿ ಓಂಕಾರವಲ್ಲದೆ ಬೇರೇನೂ ಇರಲಿಲ್ಲ ಎಂದು ಹೇಳಿ ಓಂಕಾರೋಪದೇಶವನ್ನೂ ಶಿವನು ಬ್ರಹ್ಮ, ವಿಷ್ಣುಗಳಿಗೆ ಮಾಡಿದನಂತೆ. ಅಲ್ಲದೆ, ಆತನೇ ಓಂಕಾರಜಪದೊಡನೆ ಷಡಕ್ಷರಸ್ತೋತ್ರ ಸಹಿತ, ಒಂದುದಳ ಬಿಲ್ವಪತ್ರೆಯನ್ನು ಅರ್ಪಿಸಿದರೂ, ನಾನು ಸಂತುಷ್ಟನಾಗುತ್ತೇನೆಂದು ಹೇಳಿದನೆಂಬುದು ಶಿವಪುರಾಣಾಮೃತದ ಉಲ್ಲೇಖ. ಒಟ್ಟಾರೆ ಸಕಲವಿದ್ಯೆಗಳಿಗೂ ಸರ್ವದಾ ಕಾರಣನಾದ, ಅವುಗಳಲ್ಲಿ ವಿಜೃಂಭಿಸುವ ಪರಮೇಶ್ವರನನ್ನು **ಈಶಾನಃ ಸರ್ವ ವಿದ್ಯಾನಾಂ** ಎಂದು ಶೃತಿವಾಕ್ಯಗಳು ಕೊಂಡಾಡಿವೆ. ಶಿವನು ನೀಲಕಂಠ, ಕಾಳಕಂಠ, ವಿಷಕಂಠನೆಂಬ ಹೆಸರುಗಳನ್ನೂ ಹೊಂದಿದವನು. ಕಂಠದಲ್ಲಿ ಧರಿಸಿದ ಕಾಲಕೂಟ ಮತ್ತು ಶೇಷನಾಗಗಳು ಶಿವನ ಮೃತ್ಯುಂಜಯರೂಪವನ್ನು ಸ್ಪಷ್ಟಪಡಿಸುತ್ತವೆ. ಅಲ್ಲದೆ ಆತನ ಕಂಠಭಾಗ ಕಪ್ಪಾಗಿರುವುದನ್ನು ಸೂಚಿಸುತ್ತವೆ. ಮಹಾಭಾರತದ ಅನುಶಾಸನಪರ್ವದಲ್ಲಿ ಶಿವನು ಪಾರ್ವತಿಗೆ ಹೇಳುವ ಕಾರಣವೆಂದರೆ, ಇಂದ್ರನು ಒಮ್ಮೆ ತನ್ನ ಮೇಲೆ ಪ್ರಯೋಗಿಸಿದ ವಜ್ರಾಯುಧದಿಂದ ದಗ್ಧವಾಗಿ ಆತನ ಕಂಠ ನೀಲವಾಯಿತು ಎಂಬುದು. ಈ ಎಲ್ಲ ಹಿನ್ನೆಲೆಯಿಂದ ಮುತ್ತಯ್ಯಭಾಗವತರು ಮೇಲಿನಂತೆ ಪದಪ್ರಯೋಗ ಮಾಡಿದ್ದಾರೆನ್ನಬಹುದು.

ಕೃತಿಯು ಅತ್ಯಂತ ರಂಜಕವಾದ ಕೀರವಾಣಿ ರಾಗದಲ್ಲಿ ಸಂಯೋಜನೆಯಾಗಿದೆ. ಕೀರವಾಣಿಯು 21ನೇ ಮೇಳರಾಗ. **ಸ ರಿ ಗ ಮ ಪ ದ ನಿ ಸ – ಸ ನಿ ದ ಪ ಮ ಗ ರಿ ಸ** ಎಂಬುದು ರಾಗದ ಆರೋಹಣ ಅವರೋಹಣಗಳು. ಗಮಕವರೀಕವಾದ, ಮೂರ್ಚನಾಕಾರಕವಾದ, ಭಕ್ತಿರಸ ಪ್ರಧಾನವಾದ ರಾಗವಿದು. ದೀಕ್ಷಿತರ ಪಂಥದಲ್ಲಿ ಈ ರಾಗದ ಹೆಸರು ಕಿರಣಾವಳಿಯಾಗಿದೆ. ತ್ಯಾಗರಾಜರು, ಕಿರಣಾವಳಿ ರಾಗವನ್ನು ಕೀರವಾಣಿಯಲ್ಲಿ ಜನ್ಯವೆಂದು ಪರಿಗಣಿಸಿ, ಕೀರವಾಣಿ ಮೇಳದಲ್ಲೂ, ಕಿರಣಾವಳಿ ರಾಗದಲ್ಲೂ **(ಪರಾಕುನೀಕೇಲರಾ)** ಕೃತಿಗಳನ್ನು ರಚಿಸಿದ್ದಾರೆ. ಕೀರವಾಣಿಯ ಕೆಲವು ಪ್ರಸಿದ್ಧ ರಚನೆಗಳೆಂದರೆ, ತ್ಯಾಗರಾಜರ **ಕಲಿಗಿಯುಂಟೇಗದ,** ಪಟ್ನಂ ಸುಬ್ರಹ್ಮಣ್ಯ ಅಯ್ಯರ್‌ರ **ವರಮುಲೊಸಗಿ,** ಮುತ್ತಯ್ಯಭಾಗವತರದೇ ಆದ **ಅಂಬವಾಣಿ,** ರಾಮನಾಥಪುರಂ ಶ್ರೀನಿವಾಸ ಅಯ್ಯಂಗಾರ್‍ರ **ನಿಜಮುಗರಾಮ** ಕೃತಿಗಳು, ಪಟ್ನಂ ಸುಬ್ರಹ್ಮಣ್ಯ ಅಯ್ಯರ್‌ರ **ಚಲಮೇಲ** ವರ್ಣಗಳು. ಪ್ರಸ್ತುತ ಕೃತಿ ಸ್ವರಮಯಾ ಕಿರುದಾದ ಒಂದು ಚಿಟ್ಟೆಸ್ವರವನ್ನೂ ಹೊಂದಿದೆ.

ತ್ರಯೀಮೂರ್ತಯೇ ನಮಃ

## 44. ಶ್ರೀತ್ರಯೀಮೂರ್ತೇ ಜಯಜಯ

**ರಾಗ – ಜಯನಾರಾಯಣಿ** **ರೂಪಕತಾಳ**

**ಶ್ರೀತ್ರಯೀಮೂರ್ತೇ ಜಯಜಯಜಯ ಶುಭಕೀರ್ತೇ।**
**ಮಾತೃಭೂತ ಮಂಗಳಕರ ಮಹಾದೇವ ದೇವದೇವ॥**
**ಉರಗರಾಜ ಕಂಕಣ ರುದ್ರಾಕ್ಷಭೂಷಣ।**
**ಹರಹರಶಿವ ಹರಿಕೇಶ ಅಮರವಿನುತ ಮಾಂಪಾಲಯ॥**

ಮಂಗಳಕರನೆಂದು ಕೀರ್ತಿಸಲ್ಪಟ್ಟ ವೇದಮೂರ್ತಿಯೇ ನಿನಗೆ ಜಯವಾಗಲಿ. ಮಾತಾಪಿತನೂ, ಮಂಗಳಕರನೂ ಆದ ನೀನು ದೇವತೆಗಳಿಂದಲೂ ಸ್ತುತಿಸಲ್ಪಟ್ಟವನು. ಉರಗಗಳನ್ನು ಕಂಕಣವಾಗಿಯೂ, ರುದ್ರಾಕ್ಷಿಗಳನ್ನು ಭೂಷಣವಾಗಿಯೂ ಧರಿಸಿರುವ ಮಹಾದೇವನೇ, ನನ್ನನ್ನು ರಕ್ಷಿಸು ಎಂದು ಮುತ್ತಯ್ಯಭಾಗವತರು ಪ್ರಸ್ತುತ ಕೃತಿಯಲ್ಲಿ ಶಿವನನ್ನು ಪ್ರಾರ್ಥಿಸಿದ್ದಾರೆ.

ಮಹಾದೇವನೆಂಬ ನಾಮೋಚ್ಚಾರಣೆಗೆ ವಿಶೇಷವೊಂದನ್ನು ಹೇಳುವುದುಂಟು. ಮಹಾದೇವ ಮಹಾದೇವ ಮಹಾದೇವನೆಂದು ಮೂರು ಬಾರಿ ಕೂಗಿದವರ ಸಂರಕ್ಷಣೆಗಾಗಿ ಶಿವನು ಕರುವಿನ ಕರೆಗೆ ಓಗೊಟ್ಟ ಹಸುವಿನಂತೆ ಓಡಿಬರುವನಂತೆ. ಅಲ್ಲದೆ ಒಮ್ಮೆ ಮಹಾದೇವನೆಂದೊಡನೆಯೇ ಭಕ್ತನಿಗೆ ಆತ ವರಪ್ರಸಾದ ಮಾಡಿಬಿಡುವದರಿಂದ, ಇನ್ನೆರಡು ಬಾರಿಯ ಮಹಾದೇವ ನಾಮೋಚ್ಚಾರ ಭಕ್ತನಿಗೆ ಶಿವನೇ ಋಣಿಯಾಗಿರುತ್ತಾನಂತೆ. ಎಂದರೆ ಈಶ್ವರನು ಶೀಘ್ರಫಲಪ್ರದನೆಂಬುದು ಇಲ್ಲಿನ ಭಾವಾರ್ಥ.

**ಮಹಾದೇವ ಮಹಾದೇವ ಮಹಾದೇವೇತಿ ವಾದಿನಂ।**
**ವತ್ಸಂ ಗೌರಿವ ಗೌರೀಶೋ ಧಾವಂತಮನುಧಾವತಿ॥**
**ಮಹಾದೇವ ಮಹಾದೇವ ಮಹಾದೇವೇತಿ ಯೋ ವದೇತ್।**
**ಏಕೇನ ಮುಕ್ತಿಮಾಪ್ನೋತಿ ದ್ವಾಭ್ಯಾಂ ಶಂಭೂ ಋಣೀ ಭವೇತ್॥**

ಇನ್ನು ಈಶ್ವರನು ರುದ್ರಾಕ್ಷಭೂಷಣನಾಗಿದ್ದಾನೆ. ಶಿವನು ಹಿಂದೆ ಸಾವಿರ ವರ್ಷಕಾಲ ತಪಸ್ಸಿನಲ್ಲಿ ತೊಡಗಿದ್ದನಂತೆ. ಆದರೆ ಅವನ ಗಮನವೆಲ್ಲ ತನ್ನ ಭಕ್ತರ ಕಡೆಗೇ ಇದ್ದುದರಿಂದ ತಪಸ್ಸು ಸಿದ್ಧಿಯಾಗಲಿಲ್ಲವಂತೆ. ಇದರಿಂದ ಆತನ ಕಣ್ಣಿನಲ್ಲಿ ಜಲಬಿಂದುಗಳು ಉದುರತೊಡಗಿ, ಅವೇ ರುದ್ರಾಕ್ಷಿವೃಕ್ಷಗಳಾಯಿತೆಂದೂ, ಇದನ್ನು ಆತ ನಾಲ್ಕೂ ವರ್ಣದವರಿಗೂ ಸಮನಾಗಿ ಹಂಚಿದ್ದಾಗಿಯೂ ತನ್ನ ಭಕ್ತರೂ ಅದನ್ನು ಧರಿಸಲೇಬೇಕು, ಇದರಿಂದ ನಾನಾ ವಿಧದ ಫಲ ಉಂಟಾಗುತ್ತದೆಂದು ಶಿವನೇ ಪಾರ್ವತಿಯೊಂದಿಗೆ ಹೇಳಿದಂತೆ ಶಿವಪುರಾಣಾಮೃತದಲ್ಲಿದೆ.

ಇನ್ನು, ತ್ರಯೀಮೂರ್ತೇ ಎಂಬ ಪ್ರಸ್ತುತ ಕೃತಿಯು ಜಯನಾರಾಯಣೀ ರಾಗಕ್ಕೆ ಅಳವಟ್ಟಿದೆ. ಅಂತೆಯೇ ಶಿವನಿಗೆ ಇಲ್ಲಿ ಜಯಜಯಜಯ ಎಂದು ಜಯಘೋಷ ಮಾಡಲಾಗಿದೆ. ಜಯನಾರಾಯಣಿ ರಾಗವು 22ನೇ ಖರಹರಪ್ರಿಯ ಮೇಳದಲ್ಲಿ ಜನ್ಯವಾದ ಉಪಾಂಗರಾಗ. ಆರೋಹಾವರೋಹಣಗಳು **ಸ ರಿ ಗಾ ಮ ಪ ದ ಸ - ಸ ನಿ ದ ಪ ಮ ಗ ರಿ ಸ.** ಅಷ್ಟೇನೂ ಪ್ರಸಿದ್ಧವಲ್ಲದ, ಷಾಡವಸಂಪೂರ್ಣವಾದ ಈ ರಾಗದಲ್ಲಿ ಭಾಗವತರ ಪ್ರಸ್ತುತ ಕೃತಿ ಶ್ರೀತ್ರಯೀಮೂರ್ತೇ, ತ್ಯಾಗರಾಜರ **ಮನವಿನಿ ವಿನುಮಾ** ಎಂಬ ಕೃತಿಗಳಿವೆ. ಭಾಗವತರು ತಮ್ಮ ಕೃತಿಗೆ ಚಿಟ್ಟೆಸ್ವರವೊಂದನ್ನೂ ಅಳವಡಿಸಿದ್ದಾರೆ.

ಅನೀಶ್ವರಾಯ ನಮಃ

## 45. ಅನೀಶ್ವರಂ ಅಂಬಿಕೇಶ್ವರಂ

**ರಾಗ – ಚಾರುಕೇಶಿ** **ಆದಿತಾಳ**

**ಅನೀಶ್ವರಂ ಅಂಬಿಕೇಶ್ವರಂ॥**
**ಮುನೀಶ್ವರಾದಿ ಸೇವಿತ ಚರಣಂ ಮುರಹರನುತಂ ಮೂಲಹೇತುಂ॥**
**ಕಾಲಾತೀತಂ ಕಪಾಲಹಸ್ತಂ ಕಾಶೀನಾಥಂ ಕಾಮಾಂತಕಂ।**
**ಬಾಲಶಶಿಧರಂ ಭಕ್ತಪ್ರಿಯಂ ವರಂ ಕಾಲಕಾಲ ಹರಿಕೇಶಂ ವಂದೇ॥**

ಅನೀಶ್ವರನು, ಅಂಬಿಕೇಶ್ವರನು, ಮುನಿಗಳಿಂದ ಸೇವಿಸಲ್ಪಟ್ಟ ಪಾದಗಳುಳ್ಳವನು, ವಿಷ್ಣುವಿನಿಂದ ಸ್ತುತಿಸಲ್ಪಟ್ಟವನು, ಜಗತ್‌ಸೃಷ್ಟಿಗೆ ಮೂಲಾಧಾರನೂ ಆದ ಹರಿಕೇಶನಿಗೆ ನಮಸ್ಕಾರಗಳು. ಇಂತಹ ಕಪಾಲಹಸ್ತ, ಕಾಶೀಕ್ಷೇತ್ರದ ಒಡೆಯ, ಕಾಮನಿಗೆ ಯಮನೋಪಾದಿಯಲ್ಲಿದ್ದ, ಬಾಲಶಶಿಯನ್ನು ಧರಿಸಿದ, ಭಕ್ತಿಪ್ರಿಯನಾದ ಶ್ರೇಷ್ಠನಿಗೆ ನಮಸ್ಕಾರಗಳು.

ಪ್ರಸ್ತುತ ಕೃತಿಯಲ್ಲಿ ಭಾಗವತರು ಪುನಃ ಈಶ್ವರನನ್ನು ಕಾಲಾತೀತನೂ, ಕಾಲಕಾಲನೂ ಹೌದೆಂಬುದನ್ನು ನುಡಿಯುತ್ತಾರೆ. ಕೃತಿಯು 26ನೇ ಮೇಳ ಚಾರುಕೇಶಿಯಲ್ಲಿ ಸಂಯೋಜನೆಗೊಂಡಿದೆ. ಮೇಳಕರ್ತವಾದ್ದರಿಂದ ಸಪ್ತಸ್ವರಗಳೂ ರಾಗದ ಆರೋಹಾವರೋಹಣಗಳಲ್ಲಿದೆ. **ಸ ರಿ ಗ ಮ ಪ ದ ನಿ ಸ** – **ಸ ನಿ ದ ಪ ಮ ಗ ರಿ ಸ**. ಇದು ರಾಗದ ಆರೋಹಾವರೋಹಣಗಳಾಗಿವೆ. ರಾಗದ ಪೂರ್ವಾಂಗವು ಶಂಕರಾಭರಣವನ್ನೂ, ಉತ್ತರಾಂಗವು ತೋಡಿರಾಗವನ್ನೂ ಬಿಂಬಿಸುತ್ತದೆ. ಸಾರ್ವಕಾಲಿಕವಾದ ಈ ರಾಗವನ್ನು ತ್ಯಾಗರಾಜರು ಪ್ರಕಾಶಕ್ಕೆ ತಂದಂತೆ ಹೇಳುತ್ತದೆ. ಸಮಕಾಲೀನರಾಗಿದ್ದ ಸ್ವಾತಿತಿರುನಾಳ್ ಮಹಾರಾಜರೂ ಈ ರಾಗದಲ್ಲಿ ಕೃತಿಗಳನ್ನು ರಚಿಸಿದ್ದಾರೆ ವಿಶೇಷವಾಗಿ ಈ ರಾಗದಲ್ಲಿ ಬಳಕೆಯಲ್ಲಿರುವ ರಚನೆಗಳೆಂದರೆ ತ್ಯಾಗರಾಜರ **ಆಡಿಮೋಡಿಗಲದೆ,** ತಿರುನಾಳರ **ಕೃಪಯಾಪಾಲಯ ಶೌರೇ, ಜಯಜಯ ಪದ್ಮನಾಭ**ಗಳು.

ಭಾಗವತರ ಪ್ರಸ್ತುತ ಕೃತಿಯಲ್ಲಿ ಚಿಕ್ಕದಾದ ಒಂದು ಚಿಟ್ಟೆಸ್ವರವೂ ಇದೆ.

ಸರ್ವಜ್ಞಾಯ ನಮಃ

## 46. ಸರ್ವಜ್ಞಾ ಸಾಂಬ ಸಹಸ್ರಾಕ್ಷ

**ರಾಗ – ರವಿಚಂದ್ರಿಕಾ** **ರೂಪಕತಾಳ**

**ಸರ್ವಜ್ಞಾ ಸಾಂಬ ಸಹಸ್ರಾಕ್ಷ ನಮೋಸ್ತುತೇ।**
**ಪರ್ವತ ತನಯಾಪತೇ ಭಕ್ತಪಾಲ ದಯಾನಿಧೇ॥**
**ವೇದವಿನುತ ವಿರೂಪಾಕ್ಷ ವಿಕಟಾನನ ಗುಹತಾತ।**
**ನಾದರೂಪ ನಂದಿವಾಹ ನಾರಾಯಣಪ್ರಿಯಶಂಕರ।**
**ಮೋದಹೃದಯ ಮುನಿವಂದ್ಯ ಮೂಲಹರಿಕೇಶ॥**

ಸರ್ವಜ್ಞನಾದ ಸಾಂಬನಿಗೆ ನಮಸ್ಕಾರಗಳು. ಪಾರ್ವತೀಪ್ರಿಯ ಭಕ್ತಪಾಲ, ದಯಾನಿಧಿ, ವೇದವಿನುತ, ವಿಶಾಲಮುಖವುಳ್ಳ (ವಿಕಟ–ವಿಶಾಲ), ಸ್ಕಂದನ ತಂದೆ, ನಾದರೂಪಿ, ನಂದಿಯನ್ನು ವಾಹನವಾಗುಳ್ಳ, ವಿಷ್ಣುಪ್ರಿಯಶಂಕರ, ಸಂತೋಷಹೃದಯಿ, ಮುನಿವಂದ್ಯ, ಜಗನ್ಮೂಲವಾದ ಹರಿಕೇಶನಿಗೆ ವಂದನೆಗಳು.

ಈಶ್ವರನ ಪರತ್ವ ಎಂದರೆ, ಸರ್ವಶ್ರೇಷ್ಠತೆ ಮತ್ತು ಸರ್ವಜ್ಞತ್ವ. ಜಗತ್ತಿನ ಯಾವುದೂ ಈಶ್ವರನ ಪರಿಧಿಯಿಂದ ಬಾಹ್ಯವಲ್ಲ. ಇದನ್ನು ಸೂಚಿಸುವಂತೆ ಭಾಗವತರು ಈಶ್ವರನನ್ನು ಸಹಸ್ರಾಕ್ಷ ಎನ್ನುತ್ತಾರೆ. ಈಶ್ವರನಿಗೆ ತಿಳಿಯದುದು ಏನೂ ಇಲ್ಲ, ಯಾವುದೂ ಇಲ್ಲ. ಸರ್ವ ಚರಾಚರಕೋಟಿಯ ಭೂತ, ಭವಿಷ್ಯ ವರ್ತಮಾನ ಕಾಲಗಳ ವಿಷಯವೆಲ್ಲವನ್ನೂ ತಿಳಿದವನು ಈಶ್ವರ. ಅಂತೆಯೇ, ಇಲ್ಲಿ ಆತ ಸಹಸ್ರಾಕ್ಷನಾಗಿ ಸರ್ವವನ್ನೂ ವೀಕ್ಷಿಸುತ್ತಾ ಸರ್ವಜ್ಞನಾಗಿದ್ದಾನೆ ಎಂಬುದು ಭಾಗವತರ ಪ್ರಸ್ತುತ ಕೃತಿಯ ಭಾವ.

ಸರ್ವಜ್ಞಾ ಕೃತಿಯು ರವಿಚಂದ್ರಿಕೆರಾಗಕ್ಕೆ ಅಳವಟ್ಟಿದೆ. ರವಿಚಂದ್ರಿಕೆಯು 28ನೇ ಮೇಳ ಹರಿಕಾಂಬೋಜಿಯಲ್ಲಿ ಜನ್ಯ. ಆರೋಹಾವರೋಹಗಳು **ಸ ರಿ ಗ ಮ ದ ನಿ ದ ಸ – ಸ ನಿ ದ ಮ ಗ ರಿ ಸ.** ಪಂಚಮವರ್ಜ್ಯವಾದ ಸಾರ್ವಕಾಲಿಕ ಉಪಾಂಗರಾಗವಿದು. ಈ ರಾಗದಲ್ಲಿ ಹೆಚ್ಚಿನ ರಚನೆಗಳು ಕಾಣಬರುವುದಿಲ್ಲ. ಪ್ರಸಿದ್ಧ ರಚನೆಗಳೆಂದರೆ ತ್ಯಾಗರಾಜರ **ಮಾಕೇಲರಾವಿಚಾರಮು, ನಿರವಧಿಸುಖದಾ** ಹಾಗೂ ಭಾಗವತರ **ಸರ್ವಜ್ಞಾ ಸಾಂಬ** ಕೃತಿಗಳು. ಭಾಗವತರ ಈ ಕೃತಿಗೆ ರಾಗಭಾವಪೂರ್ಣವಾದ ಸುಂದರ ಚಿಟ್ಟಸ್ವರವೂ ಅಳವಟ್ಟಿದೆ.

ಪರಮಾತ್ಮನೇ ನಮಃ

## 47. ಪರಮಾತ್ಮನೇ ಪಶುಪತೇ

**ರಾಗ – ಹಂಸಭ್ರಮರಿ** **ರೂಪಕತಾಳ**

**ಪರಮಾತ್ಮನೇ ಪಶುಪತೇ ಭಕ್ತಪಾಲಾಯ ನಮಸ್ತೇ॥**
**ಕರಿಚರ್ಮಾಂಬರಧರಾಯ ಕಲಿಕಲ್ಮಶಹರಾಯ॥**
**ಸರ್ವಲೋಕಹಿತಕರಾಯ ಸರ್ವಶತೃಸಂಹಾರಾಯ।**
**ಸರ್ವವೇದಸಾರಾಯ ಸರ್ವಜೀವಶಂಕರಾಯ।**
**ಸರ್ವಸಂಪತ್ಪ್ರದಾಯ ಸರ್ವಾಯ ಹರಿಕೇಶಾಯ॥**

ಭಕ್ತರಕ್ಷಕನಾದ ಪರಮಾತ್ಮನೇ, ಪಶುಪತಿಯೇ ನಿನಗೆ ವಂದನೆಗಳು. ಆನೆಯ ಚರ್ಮವನ್ನು ಧರಿಸಿದ ನೀನು ಕಲಿಕಲ್ಮಶಗಳನ್ನು ನಾಶಮಾಡುವಾತನು. ಸರ್ವಲೋಕಗಳಿಗೂ ಹಿತನಾಗಿ, ಸರ್ವಶತೃಸಂಹಾರಕನಾಗಿ, ಎಲ್ಲ ವೇದಗಳ ಸಾರನೂ, ಎಲ್ಲ ಜೀವರಿಗೂ ಮಂಗಳವನ್ನುಂಟುಮಾಡಿ ಸರ್ವಸಂಪತ್ತನ್ನು ನೀಡುವ ನೀನೇ ಎಲ್ಲವೂ ಆಗಿದ್ದೀಯ. ನಿನಗೆ ನಮಸ್ಕರಿಸುತ್ತೇನೆ ಎಂದು [illegible] ಪ್ರಸ್ತುತ ಕೃತಿಯಲ್ಲಿ ಭಾಗವತರು ಹಾಡಿದ್ದಾರೆ.

ಪರಮಾತ್ಮನೇ ಪಶುಪತೇ ಎಂದಾರಂಭವಾಗುವ ಈ ಕೃತಿಯು ಅಪರೂಪವಾದ ಹಂಸಭ್ರಮರಿ ರಾಗಕ್ಕೆ ಅಳವಟ್ಟಿದೆ. ಹಂಸಭ್ರಮರಿಯು 58ನೇ ಮೇಳ ಹೇಮವತಿಯಲ್ಲಿ ಜನ್ಯವಾದ ಷಾಡವ ಸಂಪೂರ್ಣರಾಗ. ಹಂಸ ಎಂದಾರಂಭವಾಗುವ ಮೂವತ್ತಕ್ಕೂ ಹೆಚ್ಚು ರಾಗಗಳು ನಮ್ಮ ಸಂಗೀತಕ್ಷೇತ್ರದಲ್ಲುಂಟು. ಹಂಸಭ್ರಮರಿಯ ಆರೋಹಾವರೋಹಗಳು **ಸ ರಿ ಗ ಮ ಪ ದ ಸ – ಸ ನಿ ದ ಪ ಮ ಗ ರಿ ಸ.** ಭಾಗವತರು ತಮ್ಮ ಈ ಕೃತಿಗೆ ಚಿಕ್ಕದಾದ ಚಿಟ್ಟೆಸ್ವರವೊಂದನ್ನು ಸಂಯೋಜಿಸಿದ್ದಾರೆ.

ಸೋಮಸೂರ್ಯಾಗ್ನಿ ಲೋಚನಾಯ ನಮಃ

## 48. ಸೋಮಸೂರ್ಯಾಗ್ನಿಲೋಚನ ಮಾಮವ

ರಾಗ – ಹಂಸಾನಂದಿ ಮಿಶ್ರಛಾಪುತಾಳ

**ಸೋಮಸೂರ್ಯಾಗ್ನಿ ಲೋಚನ ಮಾಮವ॥**
**ಕಾಮಿತಫಲಪ್ರದ ಕಾಂಚನವಿಗ್ರಹ ಭೂಮಿಜಪತಿನುತ ಪುರಂದರಸೇವಿತ॥**
**ಶಂಭೋ ಸಚ್ಚಿದಾನಂದ ಶಂಕರ ಸದಾಶಿವ ಶಾಂತನಿರ್ವಿಕಾರ ಸಕಲಸಂಪತ್ಕರ॥**
**ಕುಂಭೋದ್ಭವಾದಿ ಮುನಿಗಣಸೇವಿತ ಕುಬೇರಮಿತ್ರ ಹರಿಕೇಶ॥**

ಸೂರ್ಯಚಂದ್ರ ಅಗ್ನಿಗಳನ್ನು ಕಣ್ಣಾಗಿ ಉಳ್ಳ, ಅಭೀಷ್ಟದಾಯಕನಾದ, ಬಂಗಾರ ವಿಗ್ರಹರೂಪದ, ವಿಷ್ಣುವಿನಿಂದಲೂ(ಶ್ರೀರಾಮ), ಪುರಂದರದಾಸರಿಂದಲೂ ಸೇವಿಸಲ್ಪಟ್ಟ, ಸಚ್ಚಿದಾನಂದ ಶಂಕರ ಸದಾಶಿವ ಸಕಲಸಂಪತ್ಕರನಾದ ಶಿವನಲ್ಲಿ ಭಾಗವತರು ತಮ್ಮನ್ನು ಕಾಪಾಡುವಂತೆ ಪ್ರಾರ್ಥಿಸಿದ್ದಾರೆ. ಈಶ್ವರನು ಅಗಸ್ತ್ಯರೇ ಮೊದಲಾದ ಮುನಿವೃಂದದಿಂದಲೂ ಸೇವಿಸಲ್ಪಟ್ಟಿದ್ದಾನೆ. ಶಿವನು ಕುಬೇರಮಿತ್ರನೆಂಬುದನ್ನು ಇದೇ ಕೃತಿಗುಚ್ಛದ 33, 42ನೇ ಕೃತಿಗಳಲ್ಲೂ ಭಾಗವತರು ಹೇಳಿದ್ದಾರೆ.

ಪುರಂದರಸೇವಿತ, ಶಾಂತನಿರ್ವಿಕಾರನೆಂಬ ವಿಶೇಷ ಅಳವಡಿಕೆಗಳಿಲ್ಲಿ ಆಕರ್ಷಕವಾಗಿವೆ. ಪುರಂದರರು ಪ್ರಧಾನವಾಗಿ ವಿಷ್ಣುಭಕ್ತರೇ. ಆದರೂ ಇತರ ದೇವತೆಗಳನ್ನೂ ಸಮಾನಭಕ್ತಿಯಿಂದ ಸ್ತುತಿಸಿದ್ದಾರೆ. ಅವರು ತಮ್ಮ ಒಂದು ರಚನೆಯಲ್ಲಿ **ಹರನನು ಕಂಡೆನು..... ಹರಿನಾರಾಯಣ ಧ್ಯಾನದಲಿ**(ಶಿವದರುಶನ ನಮಗಾಯಿತು) ಎಂದಿದ್ದಾರೆ. ಇದೇ ರಚನೆಯಲ್ಲೇ ಅಗ್ನಿತತ್ತ್ವ ಪ್ರತಿನಿಧಿಯಾದ ಜ್ಯೋತಿರ್ಲಿಂಗನ ಧ್ಯಾನವ ಮಾಡಲು ದ್ಯೂತಗಳಿಲ್ಲ ಎನ್ನುತ್ತಾರೆ. ಇಲ್ಲಿ ದ್ಯೂತಗಳಿಲ್ಲ ಎಂದರೆ ಹೆಣಗಾಟವಿಲ್ಲ ಎಂಬುದು ಅರ್ಥವಾಗುತ್ತದೆ. ವಿಷ್ಣುವನ್ನೇ ಆರಾಧಿಸುತ್ತಿದ್ದವರಾದರೂ ಶಿವನನ್ನು ಕುರಿತ ಅದೆಷ್ಟೋ ರಚನೆಗಳು ಪುರಂದರರ ಕೃತಿಭಂಡಾರದಲ್ಲಿದೆ. **ಎಂಥಾ ಚೆಲುವಗೆ ಮಗಳನು ಕೊಟ್ಟನು** ಎಂಬ ರಚನೆಯಲ್ಲಂತೂ ಶಿವನ ಪೂರ್ಣ ಚಿತ್ರಣವನ್ನವರು ನೀಡುತ್ತಾರೆ. ಕಡೆಯಲ್ಲಿ, ಇಂದಿರೆರಮಣ ಶ್ರೀಪುರಂದರವಿಠಲನ ಪೊಂದಿದವನು ಲಕ್ಷ್ಮೀಪತಿಯಾದ ವಿಷ್ಣುವನ್ನು ಹೊಂದಿದಾತ ಈಶ್ವರ ಎಂದು ಅವರು ಈ ರಚನೆಯನ್ನು ಮುಕ್ತಾಯಗೊಳಿಸುತ್ತಾರೆ.

ಇನ್ನು ನಿರ್ವಿಕಾರ ಎಂಬುದನ್ನು ಆಕಾರರಹಿತನೆಂದೂ, ತರತಮಭಾವವಿಲ್ಲದವನೆಂದೂ ಅರ್ಥೈಸಬಹುದು. ಆಕಾರರಹಿತನೆಂದರೆ, ಈಶ್ವರನು ವಿಶ್ವಾಂತಸ್ಥನಾಗಿರುವವನು. ಈ ಸಂದರ್ಭದಲ್ಲಿ ತ್ಯಾಗರಾಜರು ಹಾಡಿರುವ **ಚೀಮಲೋ ಬ್ರಹ್ಮಲೋ ಶಿವಕೇಶವಾದುಲಲೋ ಪ್ರೇಮಮೀರ ವೆಲುಗುಚುಂಡೆ** ಎಂಬ ಸಾಲು ನೆನಪಿಗೆ ಬರುತ್ತದೆ. ಅತ್ಯಂತ ಚಿಕ್ಕದಾದ ಇರುವೆಯಲ್ಲೂ, ಬ್ರಹ್ಮ ಶಿವ ವಿಷ್ಣುಗಳಲ್ಲೂ ಪ್ರೀತಿ ಉಕ್ಕುವಂತೆ ಪ್ರಕಾಶಿಸುತ್ತಿರುವ ಎಂಬುದು ಈ ಸಾಲಿನ ಅರ್ಥ. ಎಂದರೆ ಈಶ್ವರನು ವಿಶ್ವಾಂತಸ್ಥನಷ್ಟೇ ಅಲ್ಲ,

ವಿಶ್ವಾತೀತನೂ ಹೌದು. ಜಗತ್ತಿನ ಒಳಹೊರಗೂ ವ್ಯಾಪಿಸಿ ಅದರ ವಿಕಾರ ಹಾಗೂ ಪರಿಮಿತಿಯಿಂದ ದೂರಾಗಿದ್ದಾನೆ, ಶಾಂತನಾಗಿದ್ದಾನೆ ಎಂಬುದು ಶಾಂತನಿರ್ವಿಕಾರ ಎಂಬುದರ ಅರ್ಥವೆನ್ನಬಹುದು.

ಸೋಮಸೂರ್ಯಾಗ್ನಿ ಲೋಚನ ಎಂಬ ಪ್ರಸ್ತುತ ಕೃತಿಯು ಹಂಸಾನಂದಿ ರಾಗಕ್ಕೆ ನಿಬದ್ಧವಾಗಿದೆ. ಹಂಸಾನಂದಿಯು 53ನೇ ಗಮನಶ್ರಮದಲ್ಲಿ ಷಾಡವ ಉಪಾಂಗರಾಗ. ಪಂಚಮವರ್ಜ್ಯರಾಗವಾದ ಇದರ ಆರೋಹಾವರೋಹಗಳು **ಸ ರಿ ಗ ಮ ದ ನಿ ಸೆ – ಸೆ ನಿ ದ ಮ ಗ ರಿ ಸ.** ಬಹುಶಃ ಈ ರಾಗದಲ್ಲಿ ಸಂಗೀತ ತ್ರಿಮೂರ್ತಿಗಳು ಕೃತಿ ರಚಿಸಿದಂತೆ ಕಾಣಬರುವುದಿಲ್ಲ. ಆದರೆ ಇವರ ಸಮಕಾಲೀನರಾದ ಸ್ವಾತಿತಿರುನಾಳ್ ಮಹಾರಾಜರು **ಪಾಹಿಜಗಜ್ಜನನಿ** ಎಂಬ ಕೃತಿಯನ್ನು ರಚಿಸಿದ್ದಾರೆ. ಮುತ್ತಯ್ಯಭಾಗವತರು ಪ್ರಸ್ತುತ ಸೋಮಸೂರ್ಯಾಗ್ನಿ ಎಂಬ ಶಿವಸ್ತುತಿಯನ್ನೇ ಅಲ್ಲದೇ **ನೀದುಮಹಿಮ** ಎಂಬ ಕೃತಿಯನ್ನೂ ಇದೇ ರಾಗದಲ್ಲಿ ಸಂಯೋಜಿಸಿದ್ದಾರೆ. ಹಿಂದೂಸ್ಥಾನೀ ಸಂಗೀತ ಪದ್ಧತಿಯಲ್ಲಿನ ಸೊಹ್ನಿ ರಾಗವು ಈ ರಾಗವನ್ನು ಹೋಲುತ್ತದೆ.

ಇದೇ ಹೆಸರಿನ ರಾಗ ಬೇರೊಂದಿದ್ದು ಅದು 8ನೇ ಹನುಮತೋಡಿಯಲ್ಲಿ ಜನ್ಯವೆ**ನಿಸಿದೆ**.ಇದರಲ್ಲಿ **ಶಿ**.ರಂಗಯ್ಯನವರು **ಪತಿತಪಾವನಿ** ಎಂಬ ರಚನೆಯನ್ನು ಸಂಯೋಜಿಸಿದ್ದಾರೆ. ಇದರ ಆರೋಹಾವರೋಹಗಳು **ಸ ರಿ ಗ ಮ ಪ ಸೆ – ಸೆ ಪ ಮ ಗ ರಿ ಸ** ಎಂಬಂತಿದ್ದು ಔಡವರಾಗ ಇದಾಗಿದೆ.

ಸೋಮಸೂರ್ಯಾಗ್ನಿ ಕೃತಿಯು ಚಿಕ್ಕದಾದ ಒಂದು ಚಿಟ್ಟೆಸ್ವರವನ್ನೂ ಹೊಂದಿದೆ. **ಗರಿನ್ನಿಸಾ ಮಗದಮಗನಿನಿದಮ** ಹಾಗೂ **ಸರಿಗಮಾಗರಿ ಸೆನಿದಮಾಗರಿ** ಎಂಬಂಥ ಸ್ವರಜೋಡಣೆಯನ್ನು ಇದು ಹೊಂದಿದೆ.

ಹವಿಷೇ ನಮಃ

# 49. ದೇವಾಯ ಹವಿಷೇ ಧೀರಾಯ ನಮಸ್ತೇ

ರಾಗ – ಗುಂಡಕ್ರಿಯಾ ಖಂಡಛಾಪುತಾಳ

**ದೇವಾಯ ಹವಿಷೇ ಧೀರಾಯ ನಮಸ್ತೇ॥**
**ಭವಭಯಹರಣಾಯ ಪಾವನಸುಚರಿತಾಯ।**
**ಆವರಣರಹಿತಾಯ ಅಂಬಿಕಾರಮಣಾಯ॥**
**ವೇದಸ್ವರೂಪಾಯ ವೃಷಭರೂಢಾಯ।**
**ನಾದರಸ ನಿಲಯಾಯ ನವನೀತ ಹೃದಯಾಯ॥**
**ಆದಿದೇವಾಯ ಶ್ರೀಹರಿಕೇಶ್‌ರೂಪಾಯ।**
**ಮೋದಕರಚರಿತಾಯ ಮುಕ್ತಿಸುಖಭರಿತಾಯ॥**

ದೇವನೇ, ಹವಿಸ್ಸನ್ನು ಸ್ವೀಕರಿಸುವ ಧೀರನೇ, ನಿನಗೆ ನಮಸ್ಕಾರಗಳು. ಭವಭಯವನ್ನು ಹರಿಸುವ, ಸತ್ಕಥೆಗಳಿಂದ, ಒಳ್ಳೆಯ ನಡತೆಯಿಂದ ಕೂಡಿ ಸುಚಾರಿತ್ರನಾದ, ಅಂಬಿಕಾರಮಣನಾದ, ವೇದಸ್ವರೂಪನೂ, ವೃಷಭಾರೂಢನೂ, ನಾದರಸನಿಲಯನೂ, ನವನೀತಹೃದಯನೂ, ಆದಿದೇವನೂ, ಮೋದಕರಚರಿತನೂ, ಮುಕ್ತಿಸುಖಭರಿತನೂ ಆದ ಆವರಣರಹಿತನಿಗೆ ನಮಸ್ಕಾರಗಳನ್ನು ಭಾಗವತರು ಈ ಮೂಲಕ ಸಲ್ಲಿಸುತ್ತಿದ್ದಾರೆ.

ಹವಿಷೇ ಎಂದರೆ ಹವಿಸ್ಸನ್ನು ಸ್ವೀಕರಿಸುವಾತ. ಯಜ್ಞಾದಿಗಳ ಮೂಲಕ ಹವಿರ್ಭಾಗಗಳನ್ನಿತ್ತು ದೇವತೆಗಳನ್ನು ಪೂಜಿಸಿದರೆ, ದೇವತೆಗಳು ತಾವು ಪಡೆದುದಕ್ಕೆ ಪ್ರತಿಯಾಗಿ ಲೋಕಕ್ಷೇಮವನ್ನು ಉಂಟುಮಾಡುತ್ತಾರೆಂಬುದು ಅಚಲ ನಂಬುಗೆ. ಈ ಕಾರಣದಿಂದಲೇ ಮೃತ್ಯುಂಜಯ ಹೋಮಾದಿಗಳನ್ನು ಮಾಡಿ ಹೋಮದ್ರವ್ಯಗಳನ್ನು ಅಗ್ನಿಗೆ ಹಾಕಿ ಪೂರ್ಣಸಾರ್ಥಕವಾದ ಪವಿತ್ರಕಾರ್ಯಗಳನ್ನು ಮಾಡುವ ರೂಢಿಯಿದೆ.

ಶಿವನು ಆವರಣರಹಿತ. ಎಂದರೆ ನಿರ್ದಿಷ್ಟ ಪ್ರಾಕಾರಕ್ಕೆ ಸೀಮಿತನಲ್ಲ. ಪುರುಷಸೂಕ್ತ ಮತ್ತು ನಾರಾಯಣಸೂಕ್ತಗಳು ಹೇಳುವಂತೆ **ಅತ್ಯತಿಷ್ಠದ್ದಶಾಂಗುಲಂ, ಅಂತರ್ಬಹಿಶ್ಚತತ್ಸರ್ವಂ ವ್ಯಾಪ್ಯನಾರಾಯಣ ಸ್ಥಿತಃ**. ಶಿವನು ವಿಶ್ವಾಂತಸ್ಥನೂ, ವಿಶ್ವಾತೀತನೂ ಆಗಿದ್ದಾನೆ.

ಶಿವನು ಕೆಲವು ಸಂದರ್ಭಗಳಲ್ಲಿ ಉಗ್ರರೂಪ ತಾಳಿದರೂ ಆತ ನವನೀತಹೃದಯಿ. ಎಂದರೆ ಬೆಣ್ಣೆಯಂಥ ಮನಸಿನವನು. ಭಕ್ತರ ಪ್ರೀತಿಯೆಂಬ ಶಾಖಕ್ಕೆ ಬೆಣ್ಣೆಯಂತೆ ಕರಗುವಂಥ ಹೃದಯವುಳ್ಳವನಾಗಿದ್ದಾನೆ. ಒಟ್ಟಾರೆ ಪ್ರಸ್ತುತ ಕೃತಿಯಲ್ಲಿ ಶಿವನು ವಿಶ್ವಾಂತಸ್ಥನಾಗಿ ಪರಮಕರುಣಾಳುವಾಗಿ ಮುಕ್ತಿದಾಯಕನಾಗಿದ್ದಾನೆ.

ಕೃತಿಯು ಗುಂಡಕ್ರಿಯಾ ರಾಗದಲ್ಲಿದೆ. ಗುಂಡಕ್ರಿಯಾವು 15ನೇ ಮೇಳ ಮಾಯಾಮಾಳವಗೌಳದಲ್ಲಿ ಔಡವಸಂಪೂರ್ಣ ಉಪಾಂಗರಾಗ. ಪುರಾತನವಾದ ಈ ರಾಗವನ್ನು ಆಂಜನೇಯನು ಹಾಡಿ, ನಾರದರು ಕುಳಿತಿದ್ದ ಬಂಡೆಯನ್ನೇ ಕರಗಿಸಿ ಅಪಮಾನಗೊಳಿಸಿದನೆಂಬ ಪ್ರತೀತಿ ಇದೆ. ಈ ರಾಗದ ಆರೋಹಾವರೋಹಗಳು **ಸ ರಿ ಮ ಪ ನಿ ಸ – ಸ ನಿ ಪ ದ ಪ ಮ ಗ ರಿ ಸ.** ತ್ಯಾಗರಾಜವಿರಚಿತ **ಇಂತನುಚು ವರ್ಣಿಂಪ ತರಮಾ** ಎಂಬ ಕೃತಿ ಈ ರಾಗದಲ್ಲಿದೆ.

ಮುತ್ತುಸ್ವಾಮಿದೀಕ್ಷಿತರ ಪ್ರಕಾರ ಈ ರಾಗವು ಸಂಪೂರ್ಣರಾಗವಾಗಿದ್ದು ಇದರ ಆರೋಹಾವರೋಹಗಳು ಹೀಗಿವೆ.
**ಸ ರಿ ಗ ಮ ಪ ದ ನಿ ಸ – ಸ ನಿ ಪ ಮ ಗ ಮ ದ ಪ ಮ ಗ ರಿ ಸ.**

ಪ್ರಸ್ತುತ ಮುತ್ತಯ್ಯಭಾಗವತರ ಕೃತಿ ದೇವಾಯ ಹವಿಷೇ ಚಿಟ್ಟೆಸ್ವರವನ್ನೂ ಹೊಂದಿ ಚತುರ್ಧಾತು ರಚನೆಯಾಗಿದೆ.

ಯಜ್ಞಮಯಾಯ ನಮಃ

## 50. ಯಜ್ಞಮಯಂ ಶಂಕರಂ ಈಶ್ವರಂ ವಂದೇ

**ರಾಗ – ಭವಪ್ರಿಯ** **ರೂಪಕತಾಳ**

**ಯಜ್ಞಮಯಂ ಶಂಕರಂ ಈಶ್ವರಂ ವಂದೇ॥**
**ಅಜ್ಞಾನತಿಮಿರಹರಂ ಸುಜ್ಞಾನ ದೀಪಂ ಪ್ರಭುಂ॥**
**ನಿಜಭಕ್ತಸಮಾಗಮ ನಿಗಮಾಗಮವರ್ಣಿತಂ।**
**ಭುಜಂಗಮಣಿ ಭೂಷಿತಂ ಪೂರ್ಣಂ ಕೃಪಾನಿಧಿಂ।**
**ಅಜಮುಖಸೇವಿತಂ ಹರಿಕೇಶಂ ಈಶಂ॥**

ಯಜ್ಞಮಯನಾದ ಈಶ್ವರನನ್ನು, ಶಂಕರನನ್ನು ವಂದಿಸುತ್ತೇನೆ. ಶಿವನು ಅಜ್ಞಾನವೆಂಬ ಅಂಧಕಾರವನ್ನು ಹೋಗಲಾಡಿಸಿ ಸುಜ್ಞಾನವೆಂಬ ಬೆಳಕನ್ನು ನೀಡುವಾತನು. ನಿಜಭಕ್ತವೃಂದದಲ್ಲಿದ್ದಾಗ ಆಗಮನಿಗಮಗಳ ಮೂಲಕ ವರ್ಣಿತನಾದವನು. ನಾಗಮಣಿಭೂಷಿತನೂ, ಪೂರ್ಣನೂ, ಕೃಪಾನಿಧಿಯೂ, ಬ್ರಹ್ಮನಿಂದ ಸೇವಿಸಲ್ಪಟ್ಟವನೂ, ಹರಿಕೇಶನೂ, ಈಶನೂ ಆದ ಶಿವನನ್ನು ನಮಸ್ಕರಿಸುತ್ತೇನೆ ಎಂಬುದು ಕೃತಿಯ ಭಾವಾರ್ಥ.

ಶಿವನನ್ನು ಯಜ್ಞಮಯನೆನ್ನುವಲ್ಲಿ ವಿಶೇಷವಿದೆ. ಮೇಲ್ನೋಟದಲ್ಲಿ ಶಿವನು ಯಜ್ಞಗಳಿಂದ ತೃಪ್ತನಾದವನು ಎಂಬ ಅರ್ಥ ಹೇಳಬಹುದು. ಆದರೆ ಯಜ್ಞ ಎಂಬುದು ಒಂದು ಸಿದ್ಧಾಂತವಲ್ಲ. ಇದು ಒಂದು ಸತ್ಯ. ಎಲ್ಲೆಲ್ಲೂ ಕಾರ್ಯಶೀಲವಾಗಿರುವ ಒಂದು ವಾಸ್ತವತೆ ಯಜ್ಞ ಎನಿಸುತ್ತದೆ. ಶೃತಿ ಸಮೂಹಗಳು **ಯಜ್ಞೇ ಸರ್ವಂ ಪ್ರತಿಷ್ಠಿತಃ** ಎನ್ನುತ್ತಾ ಎಲ್ಲಾ ಶ್ರೇಯಸ್ಸೂ ಯಜ್ಞದಲ್ಲಿಯೇ ಅಡಕವಾಗಿದೆಯೆಂದು ಝೇಂಕರಿಸುತ್ತವೆ. ಕರ್ಮಯೋಗಿಯಾದವನನ್ನು ಸನ್ಮಾರ್ಗಕ್ಕೆ ಒಯ್ದು, ಅಧ್ಯಾತ್ಮಿಕ ಉನ್ನತಿಯನ್ನುಂಟುಮಾಡುವ ಮೂಲಕ, ಪರಮಾತ್ಮನಿಗೂ ಕೂಡ ಯಜ್ಞ ಎಂಬ ಹೆಸರು ವೇದದಲ್ಲಿ ಹೇಳಲಾಗಿದೆ. ಹೀಗಾಗಿ ಈಶ್ವರನು ಇಲ್ಲಿ ಯಜ್ಞಮಯನೆನಿಸಿದ್ದಾನೆನ್ನಬಹುದು. ಯಜ್ಞವು ಎಲ್ಲವನ್ನೂ ಉತ್ಪತ್ತಿ ಮಾಡುತ್ತದೆ, ಎಲ್ಲೆಲ್ಲೂ ಯಜ್ಞವು ಕೆಲಸಮಾಡುತ್ತದೆ. ಈ ದೃಷ್ಟಿಯಿಂದ ಶಿವನು ಯಜ್ಞಮಯನೇ ಹೌದು.

ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀವರ್ಯರು **ಶ್ರೀಗರಲಪುರಿ ಶ್ರೀಕಂಠಾಷ್ಟಕಮ್**ನಲ್ಲಿ

**ಯೋ ದಕ್ಷಿಣಸ್ವರೂಪಂ ಧೃತ್ವಾ ವಿಜ್ಞಾನಜ್ಞಾನಕೃತದೀಕ್ಷಃ।**
**ಮುಗ್ದೇಭ್ಯೋಽಪಿ ಸ ಪಾಯಚ್ಛ್ರೀಕಂಠಃ ಪಾದನಮ್ರಕಲ್ಪತರುಃ॥**

ಯಾರು ಮೂಢರಿಗೂ ದಕ್ಷಿಣಾಮೂರ್ತಿರೂಪದಲ್ಲಿ ಬ್ರಹ್ಮಜ್ಞಾನವನ್ನು ಕರುಣಿಸಲು ಬದ್ಧಕಂಕಣನಾಗಿರುವನೋ, ಅಂತಹ ನತಕಲ್ಪವೃಕ್ಷನಾದ ಶ್ರೀಕಂಠೇಶ್ವರನು ಸತತವೂ ರಕ್ಷಿಸಲಿ ಎನ್ನುತ್ತಾರೆ.

ಅಂತೆಯೇ ಗುರುಸ್ತೋತ್ರವೊಂದರಲ್ಲಿ ಅಜ್ಞಾನವೆಂಬ ಕತ್ತಲೆಯಿಂದ ಅಂಧನಾದವನ ಕಣ್ಣನ್ನು, ಜ್ಞಾನವೆಂಬ ಅಂಜನ ಶಲಾಕೆಯಿಂದ ಬಿಡಿಸಿದ ಶ್ರೀಗುರುವಿಗೆ ನಮಸ್ಕಾರಗಳನ್ನು ಸಲ್ಲಿಸಲಾಗಿದೆ.

**ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ**
**ಚಕ್ಷುರುನ್ಮೀಲಿತಂ ಯೇನತಸ್ಮೈ ಶ್ರೀಗುರವೇ ನಮಃ॥**

ಪ್ರಸ್ತುತ ಶಿವಾಷ್ಟೋತ್ತರಶತ ಕೃತಿಗಳ ಪ್ರಾರ್ಥನಾಕೃತಿಗಳಲ್ಲಿ ಮುತ್ತಯ್ಯಭಾಗವತರು ಶ್ರೀಸಾಂಬಶಿವ ಸದ್ಗುರೋ ಎನ್ನುತ್ತಾ ಶಿವನನ್ನೇ ಗುರುವಾಗಿ ಭಾವಿಸಿ ಸಂಬೋಧಿಸಿದ್ದಾರೆ.

ಪ್ರಸ್ತುತ ಕೃತಿ ಯಜ್ಞಮಯಂ 44ನೇ ಮೇಳಕರ್ತ ಭವಪ್ರಿಯ ರಾಗದಲ್ಲಿದೆ. ಸಂಪೂರ್ಣ ಆರೋಹಾವರೋಹಗಳನ್ನು ಹೊಂದಿದ ಸರ್ವಸ್ವರಗಮಕವರೀಕ, ಸಾರ್ವಕಾಲಿಕ, ತ್ರಿಸ್ಥಾಯಿ ಮೇಳವಿದು. ತ್ಯಾಗರಾಜರ **ಶ್ರೀಕಾಂತ** ಎಂದಾರಂಭವಾಗುವ ಕೃತಿಯೊಂದು ಈ ರಾಗದಲ್ಲಿದೆ. ಭಾಗವತರ ಕೃತಿಯು ಚಿಟ್ಟೆಸ್ವರವನ್ನು ಹೊಂದಿ ಚತುರ್ಧಾತು ಪ್ರಬಂಧವೆನ್ನುವಂತಿದೆ.

ಸೋಮಾಯ ನಮಃ

## 51. ಸೋಮಸುಂದರ ಸೂರ್ಯಲೋಚನ

**ರಾಗ – ಸರಸಾಂಗಿ** **ಆದಿತಾಳ**

**ಸೋಮಸುಂದರ ಸೂರ್ಯಲೋಚನ॥**
**ಕಾಮಕೋಟಿ ತೇಜೋಮಯವಿಭೋ।**
**ಕಂಜಜನುತ ಶುಭ ಕರುಣಾಸಾಗರ॥**
**ಸಂಗೀತಪ್ರಿಯ ಚಂದ್ರಕಲಾಧರ।**
**ಸಾಮ್ರಾಜ್ಯಪ್ರದ ಶಂಕರ ನಮಸ್ತೇ॥**
**ಭೃಂಗಿ ಪ್ರಮುಖ ವಂದಿತಚರಣ।**
**ಪಿಂಗಳ ಹರಿಕೇಶ ಪಿನಾಕಪಾಣೇ॥**

ಸೂರ್ಯಲೋಚನನೂ, ಅಭೀಷ್ಟಕೋಟಿಯನ್ನು ನೀಡುವ ತೇಜೋಮಯನೂ, ಬ್ರಹ್ಮದೇವನಿಂದ ಸ್ತುತಿಸಲ್ಪಟ್ಟವನೂ, ಶುಭನೂ, ಕರುಣಾಸಾಗರನೂ ಆದ ಸೋಮಸುಂದರನಿಗೆ ನಮಸ್ಕಾರಗಳು. ಸಂಗೀತಪ್ರಿಯನೂ, ಚಂದ್ರಕಳಾಧರನೂ, ಭೃಂಗಿಯೇ ಮೊದಲಾದವರಿಂದ ನಮಸ್ಕರಿಸಲ್ಪಡುವ ಪಿನಾಕಿಗೆ (ಪಿನಾಕವೆಂಬ ಧನುಸ್ಸನ್ನು ಹೊಂದಿದವನು) ನಮಸ್ಕಾರಗಳು. ಈತನು ತಾನು ವೈರಾಗ್ಯಮೂರ್ತಿಯಾದರೂ ಭಕ್ತರಿಗೆ ಸಾಮ್ರಾಜ್ಯಪ್ರದನಾಗಿದ್ದಾನೆ. ಇಂಥಹ ಸೋಮಸುಂದರನಿಗೆ ಭಾಗವತರು ನಮಸ್ಕರಿಸಿದ್ದಾರೆ.

ಪ್ರಸ್ತುತ ಕೃತಿ ಸೋಮಸುಂದರ 27ನೇ ಮೇಳಕರ್ತ ಸರಸಾಂಗಿಯಲ್ಲಿದೆ. ಸುಂದರವಾದ, ಸಾರ್ವಕಾಲಿಕವಾದ ಈ ಮೇಳದ ಆರೋಹಾವರೋಹಗಳು **ಸ ರಿ ಗ ಮ ಪ ದ ನಿ ಸ – ಸ ನಿ ದ ಪ ಮ ಗ ರಿ ಸ.** ತ್ಯಾಗರಾಜರ **ಮೇನುಜೂಚಿ,** ರಾಮಸ್ವಾಮಿ ಶಿವನ್ ಅವರ **ನೀಕೇಲದಯರಾದು,** ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ರ ಮನವಿ **ಚೇಕೊನವಯ್ಯ** ರಚನೆಗಳು ಈ ರಾಗದ ಮುಖ್ಯ ಕೃತಿಗಳಾಗಿವೆ.

ಪಂಚವಕ್ತ್ರಾಯ ನಮಃ

## 52. ಪಂಚವಕ್ತ್ರಂ ಆಶ್ರಯೇಹಂ

**ರಾಗ – ಹಂಸದೀಪಿಕ** | **ಆದಿತಾಳ**

**ಪಂಚವಕ್ತ್ರಂ ಆಶ್ರಯೇಹಂ॥**
**ಕುಂಜಿತಪಾದಂ ಗುಹತಾತಂ ಪಂಚನದೀಶಂ ಪರಾತ್ಪರಂ॥**
**ಬಾಣಭದ್ರಸಂಗೀತತೋಷಣಂ ಪಾರ್ವತೀಪ್ರಿಯಂ ಭಕ್ತಭೂಷಣಂ॥**
**ವಾಣೀಪತಿವಂದಿತ ವರಹರಿಕೇಶಂ ವಾಮದೇವಂ॥**

ಕುಂಜಿತಪಾದನೂ, ಗುರುಗುಹನ ತಂದೆಯೂ, ಪರಾತ್ಪರನೂ, ಬಾಣಭದ್ರನ ಸಂಗೀತದಿಂದ ಸಂತೋಷಿಸಿದವನೂ, ಪಾರ್ವತೀಪ್ರಿಯನೂ, ಭಕ್ತಭೂಷಣನೂ, ಬ್ರಹ್ಮವಂದಿತನೂ ಆದ ವಾಮದೇವನನ್ನು ನಾನು ಆಶ್ರಯಿಸುತ್ತೇನೆ. ಈತ ಪಂಚಮುಖಗಳುಳ್ಳವನೂ, ಪಂಚನದೀಶನೂ ಆದವನೆಂದು ಭಾಗವತರು ಈ ಕೃತಿಯಲ್ಲಿ ಹಾಡಿದ್ದಾರೆ.

ಶಿವನ ಪಂಚವಕ್ತ್ರಗಳು ತತ್ಪುರುಷ, ಅಘೋರ, ಸದ್ಯೋಜಾತ, ವಾಮದೇವ ಮತ್ತು ಈಶಾನಗಳು. ಓಂಕಾರಜನಿತವಾದ ಸಪ್ತಸ್ವರಗಳು ನಾದರೂಪಿಯಾದ ಶಿವನ ಈ ಪಂಚಮುಖಗಳಿಂದ ಹೊರಹೊಮ್ಮಿವೆ.

ಪಂಚನದೀಶನೆಂಬುದು ತಿರುವಯ್ಯಾರಿನ ಕ್ಷೇತ್ರದೇವತೆ. ಇಲ್ಲಿನ ಈಶ್ವರನಿಗೂ ತ್ಯಾಗರಾಜ, ಮುತ್ತುಸ್ವಾಮಿದೀಕ್ಷಿತರಿಗೂ ವಿಶೇಷವಾದ ನಂಟು. ಅಂತೆಯೇ ಇಲ್ಲಿ ಮುತ್ತಯ್ಯಭಾಗವತರೂ ತಿರುವಯ್ಯಾರಿನ ಈಶ್ವರನನ್ನು ಆಶ್ರಯಿಸಿದ್ದಾರೆ. ತಿರು ಎಂದರೆ ಮಂಗಳ, ಐಯ್ಯಾರು ಎಂದರೆ ಪಂಚನದಿಗಳು ಎಂದು ಅರ್ಥ. ಈ ಮಂಗಳಕರವಾದ ಪಂಚನದಿಗಳು, ಕಾವೇರಿ, ಅರಶಲಾರ್, ವೆನ್ನಾರು, ವೆಡಿಯಾರು ಮತ್ತು ಕುಡುಮುರುಟ್ಟಿ. ಈ ಪಂಚನದಿಗಳಿಲ್ಲಿ ಹರಿಯುವುದರಿಂದ ತಿರುವಯ್ಯಾರು ಮಂಗಳಕ್ಷೇತ್ರವೆಂದೂ, ಪಾರ್ವತೀಪರಮೇಶ್ವರರ ಕ್ಷೇತ್ರವಾದ ಇಲ್ಲಿನ ಕ್ಷೇತ್ರದೇವತೆಗೆ ಪಂಚನದೀಶ ಅಥವಾ ಪ್ರಣತಾರ್ಥಿಹರನೆಂದೂ – ದೇವಿಗೆ ಧರ್ಮಸಂವರ್ಧಿನಿ ಎಂದೂ ಹೆಸರುಂಟು. ಪ್ರಸ್ತುತ ಪಂಚವಕ್ತ್ರಂ ಕೃತಿಯಲ್ಲಿ ಭಾಗವತರು ಇಂತಹ ಪಂಚನದೀಶನನ್ನು ಆಶ್ರಯಿಸಿದ್ದಾರೆ.

ಕೃತಿಯು ಅಪರೂಪವಾದ ಹಂಸದೀಪಕ ಎಂಬ ರಾಗದಲ್ಲಿ ನಿಯೋಜಿತವಾಗಿದೆ. 23ನೇ ಮೇಳಕರ್ತ ಗೌರೀಮನೋಹರಿಯಲ್ಲಿ ಜನ್ಯವಾದ ಔಡವ ಸಂಪೂರ್ಣರಾಗವಿದು. ಅಪರೂಪವಾದ ಈ ರಾಗದಲ್ಲಿ ಈ ಮುಂಚಿನ ವಾಗ್ಗೇಯಕಾರರು ಕೃತಿ ರಚನೆ ಮಾಡಿದಂತಿಲ್ಲ. ರಾಗದ ಆರೋಹಣಾವರೋಹಣಗಳು ಸರಿಗಮಪದಸ – ಸನಿದಪಮಗರಿಸ.

ಸದಾಶಿವಾಯ ನಮಃ

## 53. ಸದಾಶಿವಂ ಸದಾಶ್ರಯೇ

ರಾಗ – ಹಂಸಗಮನಿ ಆದಿತಾಳ

**ಸದಾಶಿವಂ ಸದಾಶ್ರಯೇ ಸಚ್ಚಿದಾನಂದ ಘನಂ॥**
**ಉದಾರಗುಣಂ ಉರಗಾಭರಣಂ ಉಪನಿಷತ್ ಪ್ರತಿಪಾದ್ಯಂ ಆದ್ಯಂ॥**
**ಸನಕಾದಿವಂದಿತಂ ಸಕಲಸಂಪತ್ಪ್ರದಂ ಅನುಪಮಗುಣರಾಜಿತಂ**
**ಆನಂದ ವಿಗ್ರಹಂ ಮನಸಿಜ ಮದಹರಣಂ ಹರಂ ಅನಘಂ ಹರಿಕೇಶಂ॥**

ಸಚ್ಚಿದಾನಂದಘನನಾದ, ಆನಂದವಿಗ್ರಹ ಸದಾಶಿವನನ್ನು ಅನವರತ ಆಶ್ರಯಿಸುತ್ತೇನೆ. ಉರಗಾಭರಣನೂ, ಸನಕಾದಿ ಮುನಿಗಳಿಂದ ವಂದ್ಯನೂ, ಅನುಪಮ ಗುಣಗಳಿಂದ ಪ್ರಕಾಶಿಸುತ್ತಿರುವವನೂ, ಮನ್ಮಥನ ಅಹಂಕಾರವನ್ನು ದಹಿಸಿದವನೂ, ಪಾಪರಹಿತನೂ ಆದ ಶಿವನು ಉದಾರಗುಣಿಯಾಗಿ ಭಕ್ತರ ಅಭೀಷ್ಟಗಳನ್ನು ಅನುಗ್ರಹಿಸುತ್ತಾ ಸಕಲಸಂಪತ್ಪ್ರದನಾಗಿದ್ದಾನೆ. ಅಂತೆಯೇ ವೇದಾಂತದಲ್ಲಿ ಪ್ರತಿಪಾದಿತನಾದ ಆದ್ಯನೂ ಈತನೇ ಎಂಬುದು ಕೃತಿಯ ಭಾವಾರ್ಥವಾಗಿದೆ.

ಪ್ರಸ್ತುತ ಕೃತಿಯನ್ನು ಮುತ್ತಯ್ಯಭಾಗವತರು ಹಂಸಗಮನಿರಾಗಕ್ಕೆ ಅಳವಡಿಸಿದ್ದಾರೆ. ಇದೂ ಒಂದು ಅಪರೂಪದ ರಾಗವೇ ಹೌದು. 52ನೇ ಮೇಳ ರಾಮಪ್ರಿಯದಲ್ಲಿ ಜನ್ಯವಾದ ಈ ರಾಗದ ಆರೋಹಾವರೋಹಗಳು **ಸ ಗ ಮ ಪ ದ ನಿ ಸ – ಸ ನಿ ದ ಪ ಮ ದ ಪ ಮ ಗ ರಿ ಸ.** ಷಾಡವವಕ್ರಸಂಪೂರ್ಣವಾದ ಈ ರಾಗದಲ್ಲಿ ರಚನೆಗಳನ್ನು ಹೆಚ್ಚಿನ ವಾಗ್ಗೇಯಕಾರರು ರಚಿಸಿಲ್ಲ.